



# ಹೊಂಗನಸು



ಬಿ.ಎಂ.ಶ್ರೀ ಪ್ರತಿಷ್ಠಾನದ ವಾರ್ತಾಪತ್ರ

ಹೊಂಗನಸು – 72

| ಸಂಪುಟ: ೦೮ ಸಂಚಿಕೆ: ೫ | ಸೆಪ್ಟಂಬರ್ ೨೦೨೧ | ಪುಟಗಳು ೮ | ವಾರ್ಷಿಕ ಚಂದ ರೂ. ೨೦/– | ಸಂಪಾದಕರು : ಶ್ರೀ ಬಿ. ಆರ್. ರವೀಂದ್ರನಾಥ್ |
|---|---|---|---|---|
| Vol. 08 Issue: 5 | September 2021 | Pages - 8 | A. Sub. - Rs. 20/- | Editor : Sri. B.R. Ravindranath |





ಬಿ.ಎಂ.ಶ್ರೀ. ಪ್ರತಿಷ್ಠಾನ
ಸ್ಥಾಪನೆ : ೦೬–೦೫–೧೯೭೯
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಪ್ರತಿಷ್ಠಾನದ ರಸ್ತೆ,
೩ನೇ ಮುಖ್ಯರಸ್ತೆ,
ನರಸಿಂಹರಾಜ ಕಾಲೋನಿ
ಬೆಂಗಳೂರು – ೧೯
ದೂರವಾಣಿ :೨೬೬೧೫೮೭೭
ಇಮೇಲ್ : bmsritrust@gmail.com
web: www.bmshri.org
ಕಛೇರಿ ಸಮಯ:
ಬೆಳಗ್ಗೆ 10–30ರಿಂದ ಸಂಜೆ 5–00ಗಂಟೆ.
ಭಾನುವಾರ ರಜೆ


**೧೪–೮–೨೦೨೧**

## ಡಾ. ವಿಜಯಾಸುಬ್ಬರಾಜ್ ಗಣ್ಯಲೇಖಕಿ ಪ್ರಶಸ್ತಿ ಮತ್ತು ಪ್ರೊ. ಸೂ.ವೆಂ.ಆರಗ ವಿಮರ್ಶಾ ಪ್ರಶಸ್ತಿ ಪ್ರದಾನ ಸಮಾರಂಭ

**ಪ್ರಶಸ್ತಿ ಪ್ರದಾನ : ಡಾ. ನಲ್ಲೂರು ಪ್ರಸಾದ್,** ಕನ್ನಡ ಸಾಹಿತ್ಯ ಪರಿಷತ್ತಿನ ಮಾಜಿ ಅಧ್ಯಕ್ಷರು ಮತ್ತು ಸಾಹಿತಿಗಳು

ಬಿ.ಎಂ. ಶ್ರೀ. ಪ್ರತಿಷ್ಠಾನದ ಎಂ.ವಿ.ಸೀ. ಸಭಾಂಗಣದಲ್ಲಿ ಲೇಖಕಿ ಪ್ರೇಮಾ ಭಟ್ ಅವರಿಗೆ ಡಾ. ವಿಜಯಾ ಸುಬ್ಬರಾಜ್ ಗಣ್ಯ ಲೇಖಕಿ ಪ್ರಶಸ್ತಿ ಹಾಗೂ ಲೇಖಕ ಚಿದಾನಂದ ಸಾಲಿ ಅವರಿಗೆ ಪ್ರೊ. ಸೂ. ವೆಂ. ಆರಗ ವಿಮರ್ಶಾ ಪ್ರಶಸ್ತಿ ನೀಡಿ ಗೌರವಿಸಲಾಯಿತು. ಈ ಎರಡೂ ಪ್ರಶಸ್ತಿಗಳು ತಲಾ ಹತ್ತು ಸಾವಿರ ರೂಪಾಯಿಗಳ ನಗದು ಮತ್ತು ಪ್ರಶಸ್ತಿ ಫಲಕವನ್ನು ಒಳಗೊಂಡಿವೆ.

ಪ್ರಶಸ್ತಿ ನೀಡಿ ಸನ್ಮಾನಿಸಿ ಮಾತನಾಡಿದ ಸಾಹಿತ್ಯ ಪರಿಷತ್ತಿನ ಮಾಜಿ ಅಧ್ಯಕ್ಷರಾದ ನಲ್ಲೂರು ಪ್ರಸಾದ್ ಮಾತನಾಡಿ ಸಭೆ–ಸಮಾರಂಭಗಳಲ್ಲಿ ಕನ್ನಡದ ಪುಸ್ತಕಗಳನ್ನು ಉಡುಗೊರೆಯಾಗಿ ನೀಡುವುದು ಉತ್ತಮ ನಿರ್ಧಾರ. ಆದರೆ, ರೈತರು ಬೆಳೆಯುವ ಹೂವುಗಳನ್ನೂ ಸಹ ನೀಡುವುದು ಉತ್ತಮ ಸಂಪ್ರದಾಯವೇ ಆಗಿದೆ. ರೈತರು ಕಷ್ಟಪಟ್ಟು ಬೆಳೆಯುವ ಹೂವುಗಳಿಗೂ ಮಾರುಕಟ್ಟೆ ಬೆಲೆ ದೊರಕಿಸಿದಂತಾಗುತ್ತದೆ. ಇದ–ರಿಂದ, ರೈತರಿಗೂ ಆರ್ಥಿಕವಾಗಿ ಅನುಕೂಲವಾಗುತ್ತದೆ. ಹೂವುಗಳಿಗೆ ಸಲ್ಲುವ ಗೌರವವೂ ಹೆಚ್ಚುತ್ತದೆ. ಸರ್ಕಾರ ಈ ಕುರಿತು ತನ್ನ ನಿರ್ಧಾರವನ್ನು ಪರಿಶೀಲಿಸಬೇಕು ಎಂದು ಸಲಹೆ ನೀಡಿದರು.



ನಿವೃತ್ತ ಪ್ರಾಧ್ಯಾಪಕಿ ಡಾ. ಡಿ. ಮಂಗಳಾ ಪ್ರಿಯದರ್ಶಿನಿಯವರು ಅಭಿನಂದನೆಯ ನುಡಿಗಳನ್ನಾಡುತ್ತಾ ಬೃಹತ್ ಗ್ರಂಥಗಳನ್ನು ಬರೆಯುವುದಕ್ಕಿಂತ ಸಣ್ಣ ಕಥೆಗಳ ರಚನೆ ತೀರಾ ಕಷ್ಟದ ಕೆಲಸ. ಆದರೆ ಪ್ರೇಮಾಭಟ್ ಅವರು ಕಲಾತ್ಮಕವಾಗಿ ಕಥೆಗಳನ್ನು ಬರೆಯುವುದರಲ್ಲಿ ಯಶಸ್ವಿಯಾಗಿದ್ದಾರೆ ಎಂದು ಅಭಿಪ್ರಾಯಪಟ್ಟರು. ಶ್ರೀ ಚಿದಾನಂದ ಸಾಲಿಯವರ ಬಹು ವಿಷಯಗಳ ಸ್ನಾತಕೋತ್ತರ ಪದವಿಗಳನ್ನು ಕುರಿತು ಆಶ್ಚರ್ಯ ವ್ಯಕ್ತಪಡಿಸುತ್ತಾ ಅವರು ಕಥೆ, ಕವಿತೆ, ಗಜಲ್, ನಾಟಕ, ಸಂಶೋಧನೆ, ವಿಮರ್ಶೆ ಸೇರಿದಂತೆ ಸಾಹಿತ್ಯದ ಹಲವು ಪ್ರಕಾರಗಳಿಗೆ ಕೊಡುಗೆ ನೀಡಿದ್ದಾರೆ ಎಂದು ಶ್ಲಾಘಿಸಿದರು.

ಪ್ರಶಸ್ತಿ ಸ್ವೀಕರಿಸಿದ ಶ್ರೀಮತಿ ಪ್ರೇಮಾ ಭಟ್ ಮಾತನಾಡಿ 'ಬದುಕಿನಲ್ಲಿ ಕುತೂಹಲದ ಕಲ್ಪನೆಗಳು ಬರಹಕ್ಕೆ ಪ್ರೇರಣೆ ನೀಡುತ್ತವೆ ಎಂದು ಹೇಳುತ್ತಾ ತಮ್ಮ ಕುತೂಹಲವೇ ತಮ್ಮ ಕಥೆಗಳ ರಚನೆಗೆ ಕಾರಣ ಎಂದು ಅಭಿಪ್ರಾಯಪಟ್ಟರು. ವಿಮರ್ಶಾ ಸಾಹಿತ್ಯ ಕ್ಷೇತ್ರವು ವಿಶಿಷ್ಟವಾಗಿದ್ದು, ಅಧ್ಯಯನದ ಆಳ ಹೆಚ್ಚಿಸಿಕೊಳ್ಳುವತ್ತ ಬರಹಗಾರರು ಗಮನ ನೀಡಬೇಕು ಎಂದು ಶ್ರೀ ಚಿದಾನಂದ ಸಾಲಿಯವರು ಅಭಿಪ್ರಾಯಪಟ್ಟರು.

ಆರ್.ಲಕ್ಷ್ಮೀನಾರಾಯಣ ಅಧ್ಯಕ್ಷತೆ ವಹಿಸಿ ಮಾತನಾಡಿ, ಪ್ರಶಸ್ತಿಪುರಸ್ಕೃತರ ಸಾಹಿತ್ಯ ಸಾಧನೆಯನ್ನು ಕುರಿತು ಹೀಗೆ ವಿವರಿಸಿದರು. ಸಾಲಿಯವರದು ನಿಶಿತವಾದ ವಿಮರ್ಶನ ಶಕ್ತಿ. ಅವರಿಗೆ ಟೊಳ್ಳು ಯಾವುದು, ಗಟ್ಟಿ ಯಾವುದು ಅನ್ನುವುದರ ಗುರುತು ಬಹಳ ಬೇಗ ಹತ್ತಿ ಬಿಡುತ್ತದೆ. ಅನುವಾದ ಕುರಿತ, ಗಜಲ್‌ಗಳ ಸ್ವರೂಪ, ಹುಟ್ಟು ಕುರಿತ. ಇತ್ತೀಚಿನ ವಿಮರ್ಶೆಯ ಸ್ವರೂಪ ಮತ್ತು ಪ್ರವೃತ್ತಿಗಳನ್ನು ಚೆನ್ನಾಗಿ ಗುರುತಿಸಿರುವ ಲೇಖನಗಳಿವೆ. ಪ್ರೇಮಾಭಟ್ ಅವರು ತಮ್ಮ ಅನುಭವ, ಲೋಕ ನಿರೀಕ್ಷೆ ಮತ್ತು ಅಧ್ಯಯನಗಳಿಂದ ತಮ್ಮ ಸಮಕಾಲೀನ ಅನುಭವಗಳಿಗೆ ವಿದ್ಯಮಾನಗಳಿಗೆ ಸ್ಪಂದಿಸಿ ಬರೆದ ಲೇಖಕಿ. ಬರವಣಿಗೆಯನ್ನು ಸೂರ್ಯನೇಮಿಕ್ರಮದಿಂದ ನಿರಂತರವಾಗಿ ನಡೆಸಿಕೊಂಡು ಬಂದವರು. ಕೌಟುಂಬಿಕ ಜೀವನದ ರಸನಿಮಿಷಗಳು, ಸಾಮಾಜಿಕ ಸಮಸ್ಯೆಗಳನ್ನು ವಸ್ತುವಾಗಿಸಿಕೊಂಡು ವಿಪುಲವಾಗಿ ಕಾದಂಬರಿಗಳನ್ನು ಬರೆದವರು ಎಂದು ಅವರ ಸಾಧನೆಯನ್ನು ಪ್ರಶಂಸಿಸಿ ಅಭಿನಂದಿಸಿದರು. ಶ್ರೇಯಸ್ ಅವರು ಕನ್ನಡ ಗೀತೆ ಹಾಡಿದರು. ಡಾ. ಬಿ.ಸಿ. ರಾಜಕುಮಾರ್ ಅವರು ಕಾರ್ಯಕ್ರಮದ ವಿವರಗಳನ್ನು ಕುರಿತು ಪ್ರಸ್ತಾಪಿಸಿ, ಸ್ವಾಗತಿಸಿದರು. ಶ್ರೀ ರವೀಂದ್ರನಾಥ ವಂದಿಸಿದರು.

## ಸಂಪಾದಕೀಯ

ಬಿಎಂಶ್ರೀ ಪ್ರತಿಷ್ಠಾನದ ಸ್ಥಾಪನೆ ಆಗಿ ೪೦ ವರ್ಷಗಳು ಕಳೆದಿವೆ. ಈ ಸಂಬಂಧದಲ್ಲಿ ಹಲವಾರು ಕಾರ್ಯಕ್ರಮಗಳನ್ನು ನಡೆಸುವ ಆಸೆಗಳಿದ್ದರೂ ಕರೋನಾ ವೈರಾಣುವಿನ ದೆಸೆಯಿಂದ ಕೇವಲ ಒಂದು ದಿನದ ಕಾರ್ಯಕ್ರಮವನ್ನು ಮಾತ್ರ ಹಮ್ಮಿಕೊಳ್ಳಲಾಗಿದೆ.

ಪ್ರತಿಷ್ಠಾನದ ನಲವತ್ತು ವರ್ಷಗಳ ಪಯಣವನ್ನು ದಾಖಲಿಸುವ ಪ್ರಯತ್ನವನ್ನು ಈ ಸಂಚಿಕೆಯಿಂದ ಪ್ರಾರಂಭಿಸಲಾಗಿದೆ. ಸದಸ್ಯರು ಮತ್ತು ಓದುಗರು ಬಿಎಂಶ್ರೀ ಪ್ರತಿಷ್ಠಾನದ ಬಗೆಗಿನ ಅಪೂರ್ವ ಮಾಹಿತಿಗಳನ್ನು ಹೊಂದಿದ್ದಲ್ಲಿ ಅವುಗಳನ್ನು ನಮ್ಮ ಜೊತೆ ಹಂಚಿಕೊಂಡರೆ ಮಹದುಪಕಾರವಾಗುತ್ತದೆ.

ಕರೋನಾ ವೈರಾಣುವಿನ ಮೂರನೆಯ ಅಲೆ ಬರುವ ಭೀತಿ ಕಡಿಮೆಯಾಗುತ್ತಿದೆ. ಈ ಸ್ಥಿತಿ ಹಾಗೇ ಮುಂದುವರೆದು ಕರೋನಾವನ್ನು ನಿಯಂತ್ರಿಸುವ ಸಾಮರ್ಥ್ಯ ಮನುಕುಲಕ್ಕೆ ಲಭ್ಯವಾಗಲಿ ಎಂದು ಆಶಿಸೋಣ

– ಬಿ.ಆರ್. ರವೀಂದ್ರನಾಥ

## ಶ್ರೀಮತಿ ಸಾವಿತ್ರಮ್ಮ– ಪ್ರೊ॥ ಎಂ.ವಿ.ಸೀ. ಸಾಹಿತ್ಯ ಪುರಸ್ಕಾರ

ದಿವಂಗತ ಪ್ರೊ॥ಎಂ.ವಿ.ಸೀತಾರಾಮಯ್ಯವರು ಬಿಎಂಶ್ರೀ ಪ್ರತಿಷ್ಠಾನದ ಸ್ಥಾಪಕರು, ಹೊಸಗನ್ನಡದ ಹೆಸರಾಂತ ವಿದ್ವಾಂಸರು ಮತ್ತು ಸಂಶೋಧಕರು. ಕವಿಗಳು ಹಾಗೂ ವಿಮರ್ಶಕರು. ಅವರ ಸಹಧರ್ಮಿಣಿಯವರು ಶ್ರೀಮತಿ ಸಾವಿತ್ರಮ್ಮನವರು. ಅವರ ಮಕ್ಕಳಾದ ಶ್ರೀ ಎಂ.ಎಸ್. ಭಾಸ್ಕರ್, ಶ್ರೀ ಎಂ.ಎಸ್. ರಾಮಪ್ರಸಾದ್, ಶ್ರೀ ಎಸ್.ಟಿ. ರಾಧಾಕೃಷ್ಣ ಮತ್ತು ಶ್ರೀ ಎಂ.ಎಸ್. ಶೇಷಾದ್ರಿನಾಥ್ ಅವರು 'ಶ್ರೀಮತಿ ಸಾವಿತ್ರಮ್ಮ– ಪ್ರೊ॥ಎಂ.ವಿ.ಸೀ. ಸಾಹಿತ್ಯ ಪುರಸ್ಕಾರವನ್ನು" ಪ್ರತಿವರ್ಷ ನೀಡಲು ದತ್ತಿಯೊಂದನ್ನು ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದಲ್ಲಿ ಸ್ಥಾಪಿಸಿದ್ದಾರೆ. ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಗಣನೀಯ ಕೊಡುಗೆಯನ್ನು ನೀಡಿರುವ ಸಾಹಿತಿಯೊಬ್ಬರಿಗೆ ನೀಡುವ ಮೂವತ್ತು ಸಾವಿರ ರೂಪಾಯಿ ನಗದು ಮತ್ತು ಫಲಕವನ್ನೊಳಗೊಂಡ ಪುರಸ್ಕಾರವಿದು.

## ಪ್ರಕಟಣೆ

### ಶ್ರೀಮತಿ ಸಾವಿತ್ರಮ್ಮ– ಪ್ರೊ॥ ಎಂ.ವಿ.ಸೀ. ಸಾಹಿತ್ಯ ಪುರಸ್ಕಾರ–2021

ಬಿ.ಎಂ.ಶ್ರೀ. ಪ್ರತಿಷ್ಠಾನವು ಕೊಡಮಾಡುತ್ತ ಬಂದಿರುವ ಶ್ರೀಮತಿ ಸಾವಿತ್ರಮ್ಮ–ಪ್ರೊ. ಎಂ.ವಿ.ಸೀತಾರಾಮಯ್ಯ ಸಾಹಿತ್ಯ ಪುರಸ್ಕಾರಕ್ಕೆ, ಸಾಹಿತ್ಯ ಮತ್ತು ವಿದ್ವತ್ತಿನ ಕ್ಷೇತ್ರದಲ್ಲಿ ನೀಡಿರುವ ಗಣನೀಯ ಕೊಡುಗೆಗಾಗಿ ಖ್ಯಾತ ಸಾಹಿತಿ ಪ್ರೊ. ಶಿವರಾಮಯ್ಯ ಅವರನ್ನು ಡಾ. ಬೈರಮಂಗಲ ರಾಮೇಗೌಡ ಮತ್ತು ಡಾ. ಬೇಲೂರು ರಘುನಂದನ್ ಅವರ ಆಯ್ಕೆ ಸಮಿತಿಯು 2021ನೇ ಸಾಲಿಗೆ ಪ್ರಶಸ್ತಿಗೆ ಒಮ್ಮತದಿಂದ ಆಯ್ಕೆ ಮಾಡಿದೆ. ಪುರಸ್ಕಾರವು ನಗದು ರೂ.30,000/–(ಮೂವತ್ತು ಸಾವಿರ ರೂಪಾಯಿಗಳು) ಮತ್ತು ಫಲಕವನ್ನು ಒಳಗೊಂಡಿರುತ್ತದೆ.



## ಪದಚರಿತೆ

### ಒಂದಷ್ಟು ಪದಗಳ ಮೂಲಚೂಲಗಳ ಹುಡುಕಾಟ



– ಡಾ. ಪಿ.ವಿ. ನಾರಾಯಣ

ಮಂತ್ರ೪: ಮಂತ್ರ ಎಂದರೆ ಸಮಾಲೋಚನೆ ಎಂಬರ್ಥವೂ ಇದೆ. "ಸತ್ಯವತಿ ತಾನುಂ ಆತನುಂ ಆಳೋಚಿಸಿ ನಿಶ್ಚಿತಮಂತ್ರರಾಗಿ ಕೃಷ್ಣದ್ವೈಪಾಯನನಂ ನೆನೆದು" ಎಂಬುದು 'ಪಂಪಭಾರತ'ದ ಮಾತು. 'ಮಂತ್ರಗುಪ್ತಿ' ಎಂಬ ಶಬ್ದವನ್ನೂ ಸಮಾಲೋಚನೆ ಎಂಬರ್ಥದಲ್ಲಿ ಪಂಪ ಬಳಸಿದ್ದಾನೆ: "ಆ ಮುನಿನಾಥಂ ತ್ರಿಗುಪ್ತಿಯೊಳ್ ನೆರೆದಂ ಈ ಮಹೀನಾಥಂ ಮಂತ್ರಗುಪ್ತಿಯೊಳ್ ನೆರೆದಂ" ('ಆದಿಪುರಾಣ'). ರಾಜರುಗಳು ಸಮಾಲೋಚನೆಯಲ್ಲಿ ತೊಡಗುವ ಕೋಣೆಯನ್ನು ಪಂಪನು 'ಮಂತ್ರಾವಾಸ' ಎನ್ನುತ್ತಾನೆ ('ಮಂತ್ರಾವಾಸದೊಳ್ ಮಂತ್ರನಿಶ್ಚಿತನಾಗಿ"– ಪಂಪಭಾರತ'). ಇದನ್ನು 'ಮಂತ್ರಶಾಲೆ' ಎಂದೂ ಕರೆಯಲಾಗುತ್ತಿತು: "ವಾಲಿ ಮಂತ್ರಶಾಲೆಯಂ ಸುಗ್ರೀವಂಬೆರಸು ಪೊಕ್ಕು ಮಂತ್ರಿಮಂಡಲಮಂ ಅಪ್ತಪರಿಜನಮುಮಂ ಬರಿಸಿ" ('ಪಂಪರಾಮಾಯಣ'). ಇದನ್ನು 'ಚಂದ್ರಪ್ರಭ ಪುರಾಣ'ದಲ್ಲಿ 'ಮಂತ್ರಾಗಾರ' ಎಂದಿದೆ("ಮಂತ್ರಾಗಾರದಿಂದಂ ಕ್ಷಿತಿಪತಿ ಪೊಱಮಟ್ಟಂ").

ರಾಜನ ಮೂರು ಬಗೆಯ ಶಕ್ತಿಗಳೆಂದರೆ ಪ್ರಭುಶಕ್ತಿ, ಮಂತ್ರಶಕ್ತಿ ಮತ್ತು ಉತ್ಸಾಹಶಕ್ತಿ ಎಂಬಿವುಗಳೆಂದು 'ಪಂಚತಂತ್ರ'ದಲ್ಲಿ ಹೇಳಿದೆ; ಮಂತ್ರಶಕ್ತಿ ಎಂದರೆ "ಹಿತರ್ ಅರ್ಥಶಾಸ್ತ್ರಕುಶಲರ್ ಚತುರುಪಧಾವಿಶುದ್ಧರೆನಿಪ ಸಚಿವರೊಳ್ ಅನ್ವಿತಮಾಗೆ ಮಾಳ್ಪ ಕಾರ್ಯಂ ಪತಿಗೆಂದುಂ ಮಂತ್ರಶಕ್ತಿ ಮನುಮುನಿಮತದಿಂ" ಎಂದು ಅದೇ ಕಾವ್ಯದಲ್ಲಿ ವಿವರಿಸಲಾಗಿದೆ. ವಿಶೇಷವಾಗಿ ಯುದ್ಧಸಮಯಗಳಲ್ಲಿ ಇಂತಹ ಸಮಾಲೋಚನೆ ಅತ್ಯಂತ ಆವಶ್ಯಕ ಎಂಬ ಅಭಿಪ್ರಾಯದಲ್ಲಿ 'ಪಂಚತಂತ್ರ'ವು "ಚತುರಂಗಬಲಮೇವುದೋ ಸನ್ಮಂತ್ರಮೆ ಸಾಲ್ಗುಂ ಪುಸಿಗುಮೆ ದೇವ ಮಂತ್ರಮೂಲೋಹಿ ವಿಜಯಃ ಎಂಬೀ ವಾಕ್ಯಂ" ಎಂದು ವಿವರಿಸಿದೆ. ಇಂತಹ ಸಮಾಲೋಚನೆಯಲ್ಲಿ ದಾರಿತಪ್ಪಿದವನನ್ನು 'ಕುಮಾರವ್ಯಾಸ ಭಾರತ'ವು 'ಮಂತ್ರಭ್ರಮಿತ' ಎನ್ನುತ್ತದೆ ("ಸಮರಜಯಸಾಧಕರು ಮಂತ್ರಭ್ರಮಿತರಾಯ್ತುಪಜಯವಧೂವಿಭ್ರಮಕಟಾಕ್ಷದ ಘಾಯದಲಿ ಕಳವಳಿಸದವರಾರು").

ಸಮಾಲೋಚನೆ ನಡೆಯಿಸುವುದೇ 'ಮಂತ್ರಾಲೋಚನೆ' ("ವಿಶಾಖಭೂತಿ ಮಂತ್ರಾಲೋಚನೆಯೊಳ್ ಯುವರಾಜಂಗೆ ಬೞಿಯನಟ್ಟಿ"– 'ಶಾಂತಿಪುರಾಣ). ಯಾವ ಸಂದರ್ಭಗಳಲ್ಲಿ ಮಂತ್ರಾಲೋಚನೆ ಆವಶ್ಯಕ ಎಂಬುದನ್ನು 'ಪಂಚತಂತ್ರ'ವು ಹೀಗೆ ವಿವರಿಸುತ್ತದೆ: "ಆಗಿರ್ದ ಕಾರ್ಯದ ಪೆರ್ಚುಗೆಗಂ ಮುಂತಪ್ಪ ಕಜ್ಜಮುಮಂ ಮಾಳ್ಪುದರ್ಕಂ ಅನರ್ಥಕಮಪ್ಪ ಕಜ್ಜದ ಪ್ರತೀಕಾರಕ್ಕಂ ಆವುದಾನೊಂದಾಲೋಚನೆಗೆಯ್ದು ಮಾಳ್ಪುದುತ್ತಮ ಮಂತ್ರಂ." ಅಂತೆ–ಯೇ ಮಂತಾಲೋಚನೆಯ ನಿರ್ಣಯವನ್ನು ಗೋಪ್ಯವಾಗಿಡುವುದೂ ಆವಶ್ಯಕವೆಂದು 'ಪಂಚತಂತ್ರ'ವು ಹೇಳುತ್ತದೆ: "ಮಂತ್ರವು ಹೊಱಪಟ್ಟಲ್ಲಿ ಕಾರ್ಯವು ಕಿಡುವುದು; ಅದುಕಾರಣಮದು ಎಲ್ಲಾ ಕಡೆಯಿಂದಲೂ ಗೋಪ್ಯವಾಗಿ ರಕ್ಷಿಸಲ್ಪಡತಕ್ಕುದು."

=====

ಇನೇ ಪುಟಕ್ಕೆ

# ಸೆಪ್ಟಂಬರ್ ೨೦೨೧ರಲ್ಲಿ ಆಯೋಜಿಸಲಾಗಿರುವ ಕಾರ್ಯಕ್ರಮಗಳು

ದಿನಾಂಕ : ೧೨ -೦೯-೨೦೨೧ ಭಾನುವಾರ ಬೆಳಿಗ್ಗೆ : ೧೦-೩೦ ಗಂಟೆಗೆ
ಸ್ಥಳ : ಎಂ.ವಿ.ಸೀ. ಸಭಾಂಗಣ, ಬಿ.ಎಂ.ಶ್ರೀ ಪ್ರತಿಷ್ಠಾನ
ಶ್ರೀಮತಿ ಸಾವಿತ್ರಮ್ಮ- ಪ್ರೊ|| ಎಂ.ವಿ.ಸೀ. ಸಾಹಿತ್ಯ ಪುರಸ್ಕಾರ ಪ್ರದಾನ ಕಾರ್ಯಕ್ರಮ
ಪ್ರಶಸ್ತಿ ಪ್ರದಾನ: ಪ್ರೊ. ಎಸ್.ಜಿ. ಸಿದ್ಧರಾಮಯ್ಯ ಖ್ಯಾತ ಸಾಹಿತಿಗಳು, ಕನ್ನಡ ಅಭಿವೃದ್ಧಿಪ್ರಾಧಿಕಾರದ ಮಾಜಿ ಅಧ್ಯಕ್ಷರು
ಪ್ರಶಸ್ತಿ ಪುರಸ್ಕೃತರು : ಪ್ರೊ. ಶಿವರಾಮಯ್ಯ ಖ್ಯಾತ ಲೇಖಕರು
ಅಭಿನಂದನ ಭಾಷಣ : ಡಾ. ಕೆ.ವೈ. ನಾರಾಯಣ ಸ್ವಾಮಿ, ಕನ್ನಡ ಪ್ರಾಧ್ಯಾಪಕರು, ಖ್ಯಾತ ಲೇಖಕರು
ಅಧ್ಯಕ್ಷತೆ: ಡಾ. ಅರ್. ಲಕ್ಷ್ಮೀನಾರಾಯಣ, ಬಿ.ಎಂ.ಶ್ರೀ ಅಧ್ಯಕ್ಷರು

ದಿನಾಂಕ : ೧೯-೯-೨೦೨೧. ಭಾನುವಾರ ಬೆಳಿಗ್ಗೆ : ಬೆಳಿಗ್ಗೆ ೧೦-೩೦
ದಿ. ರಾಜೇಶ್ವರಿ ಗೌಡ ದತ್ತಿ ಕಾರ್ಯಕ್ರಮ
ಉಪನ್ಯಾಸ: ಡಾ. ಶೀಲಾದೇವಿ ಮಳಿಮಠ್ ಕನ್ನಡ ಪ್ರಾಧ್ಯಪಕರು
ವಿಷಯ : ರಾಜೇಶ್ವರಿಗೌಡ ಅವರ ಕಥೆಗಳು
ಅಧ್ಯಕ್ಷತೆ: ಡಾ. ಅರ್. ಲಕ್ಷ್ಮೀನಾರಾಯಣ

ಜಾಲತಾಣ ಕಾರ್ಯಕ್ರಮ :
ದಿನಾಂಕ : ೨೧-೦೯-೨೦೨೧ ಮಂಗಳವಾರ ಸಂಜೆ : ೪-೩೦ ಗಂಟೆಗೆ
ಶಂಬಾ ಜೋಶಿ ಮತ್ತು ಉಪ್ಪಂಗಳ ರಾಮಭಟ್ಟ ದತ್ತಿ ಕಾರ್ಯಕ್ರಮ
ಉಪನ್ಯಾಸಕರು : ಡಾ. ಶಾಂಭವಿ, ಕನ್ನಡ ಪ್ರಾಧ್ಯಾಪಕರು
ವಿಷಯ: ಕನ್ನಡ ಮತ್ತು ಕರ್ನಾಟಕ ಸಂಸ್ಕೃತಿ ಕುರಿತಂತೆ ಶಂಬಾ ಅವರ ವಿಚಾರಗಳು

ದಿನಾಂಕ : ೨೬-೦೯-೨೦೨೧ ಭಾನುವಾರ ಬೆಳಿಗ್ಗೆ : ೧೦-೩೦ ಗಂಟೆಗೆ
ಪ್ರತಿಷ್ಠಾನದ "ನಲವತ್ತರ ನಲಿವು" ಕಾರ್ಯಕ್ರಮ
ಉದ್ಘಾಟನೆ, ಪುಸ್ತಕ ಬಿಡುಗಡೆ, ವಿಚಾರ ಸಂಕಿರಣ ಮತ್ತು ಮತ್ತು ಭೋಜನ ವಿರಾಮದ ನಂತರ ಕವಿಗೋಷ್ಠಿ
(ವಾರಾಂತ್ಯದ ಲಾಕ್ ಡೌನ್ ಇದ್ದರೆ ಮುಂದೂಡಲ್ಪಡುತ್ತದೆ)
ಕಾರ್ಯಕ್ರಮದ ವಿವರಗಳನ್ನು ನಂತರ ಪ್ರಕಟಿಸಲಾಗುವುದು

೨ನೇ ಪುಟದಿಂದ

ಮಂತ್ರಿ: ಯಾವುದೇ ಬಗೆಯ ಅರ್ಥದಲ್ಲಿ ಮಂತ್ರವನ್ನು ಅರಿತವನು ಮಂತ್ರಿ' ಎನ್ನಿಸಿಕೊಳ್ಳುತ್ತಾನಾದರೂ ರಾಜನ ಸಮಾಲೋಚನೆಯಲ್ಲಿ ಸೇರುವವನನ್ನು ಈ ಶಬ್ದದಿಂದ ಕರೆಯುವುದು ಈಗಿನ ರೂಢಿ. "ಮಂತ್ರೀ ಧೀಸಚಿವೋ ಅಮಾತ್ಯೋ" ಎಂದು ಸಮಾನಾರ್ಥಕಗಳನ್ನು ಸೂಚಿಸುವ 'ಅಮರಕೋಶ'ವು ಮಂತ್ರಿಯನ್ನು 'ಧೀಸಚಿವ' ಎಂದಿರುವುದು ಗಮನಾರ್ಹ. ಅವನು ರಾಜ್ಯದ ಆಲೋಚನೆಯನ್ನು ಹೇಳುವವನು. "ನರಪತಿಯ ಬುದ್ಧಿಸಚಿವಂ ನಯಶಾಸ್ತ್ರನಪ್ಪವಂ ಮಂತ್ರಿ" ಎಂದು 'ಅಭಿಧಾನ ವಸ್ತುಕೋಶ'ವು ಹೇಳುತ್ತದೆ. ಸಚಿವನಿಗಿರಬೇಕಾದ ಅರ್ಹತೆಗಳ ಕುರಿತು 'ಮನುಸ್ಮೃತಿ'ಯಲ್ಲಿ ದೀರ್ಘವಾಗಿ ಪ್ರಸ್ತಾಪಿಸಲಾಗಿದೆ. ಒಂದು ಕಾಲದಲ್ಲಾದರೂ ರಾಜನು ಸತ್ತ ಮಂತ್ರಿಯ ಸ್ಥಾನವನ್ನು ಅವನ ಮಕ್ಕಳಿಗೆ ನೀಡುತ್ತಿದ್ದ ಪದ್ಧತಿಯಿದ್ದಂತೆ ಕಾಣುತ್ತದೆ: ಅತಿಬಳ "ಅರಸನ ಮಂತ್ರಿ ಸೋಮಶರ್ಮ"ನೆಂಬುವವನು ಸತ್ತಾಗ ಅವನ ಮಕ್ಕಳಿಗೆ ಆ ಸ್ಥಾನ ನೀಡುವ ಬಗ್ಗೆ ರಾಜ ಆಲೋಚಿಸುವ ಪ್ರಸಂಗವು 'ವಡ್ಡಾರಾಧನೆ'ಯಲ್ಲಿದೆ. ಮಂತ್ರಿಗಳಿಗಿರಬೇಕಾದ ಗುಣಗಳೇ 'ಮಂತ್ರಿಗುಣ'; ಇವುಗಳು ಯಾವುವೆಂಬುದನ್ನು 'ಪಂಚತಂತ್ರ' ಹೀಗೆ ವಿವರಿಸುತ್ತದೆ: "ಗೂಢಲಕ್ಷಣ ಭಿನ್ನಪ್ರತಿಸಂಧಾನ ಸಂಧಿದೂಷಣ ಪರಿಚಿತ್ತ ಪರೀಕ್ಷಾಲಕ್ಷಣಮೆಂಬ ಮಂತ್ರಿಗುಣಂಗಳು." ತನ್ನ ಕಾವ್ಯವು ವಿವಿಧ ಬಗೆಯ ಜನರಿಗೆ ಅವರಿಗೆ ಬೇಕಾದುದನ್ನು ನೀಡುತ್ತದೆ ಎಂದು ಹೇಳುವಾಗ ಕುಮಾರವ್ಯಾಸನು "ಮಂತ್ರೀಜನಕ್ಕೆ ಬುದ್ಧಿಗುಣ" ಎಂಬುದನ್ನೂ ಸೇರಿಸುತ್ತಾನೆ.

ರಾಜ್ಯವೊಂದರ "ಸ್ವಾಮಿ ಅಮಾತ್ಯ ಜನಪದ ದುರ್ಗ ಸುಹೃತ್ ಕೋಶ ದಂಡಮೆಂಬ ಏಳಂಗ"ಗಳಲ್ಲಿ ರಾಜನಾದ ಮೇಲೆ ಮಹತ್ವ ಪಡೆಯುವವನು 'ಅಮಾತ್ಯ' ಅಥವಾ ಮಂತ್ರಿಯೇ. ರಾಜನ ಬಳಿ ಒಬ್ಬರಿಗಿಂತ ಹೆಚ್ಚು ಮಂತ್ರಿಗಳಿರುತ್ತಿದ್ದರು; ಅವರೆಲ್ಲ ಸೇರಿ 'ಮಂತ್ರಿಮಂಡಲ'ವಾಗುತ್ತಿತ್ತು: "ವಾಲಿ ಮಂತ್ರಶಾಲೆಯಂ ಪೊಕ್ಕು ಸುಗ್ರೀವಂಬೆರಸು ಮಂತ್ರಿಮಂಡಲಮುಂ ಆಪ್ತಪರಿಜನಮುಮಂ ಬರಿಸಿ" – 'ಪಂಪರಾಮಯಣ'). ಅನೇಕ ಶಾಸನಗಳಲ್ಲಿ ಮಂತ್ರಿಗಳನ್ನು 'ಪ್ರಧಾನ'ರು ಎಂದೂ ಕರೆಯಲಾಗಿದೆ; ವಚನಗಳಲ್ಲಿ 'ಪ್ರಧಾನಿ' ಎಂಬ ರೂಪವೂ ದೊರೆಯುತ್ತದೆ. ಶಾಸನಗಳೆಲ್ಲ ಎಲ್ಲ ಮಂತ್ರಿಗಳನ್ನೂ ದಂಡನಾಯಕ ಎಂಬ ವಿಶೇಷಣದಿಂದ ಕರೆಯುತ್ತವೆ. ದುಷ್ಟಮಂತ್ರಿಯನ್ನು ತೆಗೆದುಹಾಕಬೇಕೆಂದು 'ಪಂಚತಂತ್ರ'ವು ಶಾಸ್ತ್ರಗ್ರಂಥವೊಂದನ್ನು ಉಲ್ಲೇಖಿಸಿ ಹೇಳುತ್ತದೆ: "ಪಗೆಯಪ್ಪ ಭೃತ್ಯನಂ, ಅಲುಗಾಡುವ ಹಲ್ಲಂ ದುಷ್ಟನಪ್ಪ ಮಂತ್ರಿಯಂ ಬೇರ್ವೆರಸಿ ಕೀೞ್ವುದೇ ಸುಖಂ." ವ್ಯಕ್ತಿಯೊಬ್ಬನಿಗೆ ಅವನ ಅಂತಃಕರಣಗಳೇ ಬುದ್ಧಿವಾದವನ್ನು ಹೇಳಬಲ್ಲವು ಎಂಬರ್ಥದಲ್ಲಿ ಜೋದರ ಮಾಯಣ್ಣ ಎಂಬ ವಚನಕಾರನು "ಅಂತಃಕರಣಚತುಷ್ಟಯಂಗಳೇ ನಿಮ್ಮ ಮಂತ್ರಿಗಳಯ್ಯ" ಎನ್ನುತ್ತಾನೆ.

---------

# ಬಿ.ಎಂ.ಶ್ರೀ ಪ್ರತಿಷ್ಠಾನದಲ್ಲಿ ನಡೆದ ಕಾರ್ಯಕ್ರಮಗಳ ವರದಿ

೨೨-೦೭-೨೦೨೧

## ಹಳಗನ್ನಡ ಕನ್ನಡ ಕಾವ್ಯ ಮತ್ತು ಶಾಸನ ಅಧ್ಯಯನ ತರಗತಿಗಳ ಉದ್ಘಾಟನೆ



ಶ್ರೀಮತಿ ಮಾನಸ ಅವರು ಬಿಎಂಶ್ರೀ ವಿರಚಿತ "ಕನ್ನಡ ಬಾವುಟ" ಗೀತೆಯನ್ನು ಸುಶ್ರಾವ್ಯವಾಗಿ ಹಾಡಿ ಕಾರ್ಯಕ್ರಮಕ್ಕೆ ನಾಂದಿ ಹಾಡಿದರು.

ಪ್ರತಿಷ್ಠಾನವು ಹಲವಾರು ವರ್ಷಗಳಿಂದ ಹಳಗನ್ನಡ ಅಧ್ಯಯನ ತರಗತಿಗಳನ್ನು ನಡೆಸಿಕೊಂಡು ಬರುತ್ತಿದ್ದು ಈ ವರ್ಷದ ಅಧ್ಯಯನ ತರಗತಿಗಳ ಉದ್ಘಾಟನೆಯನ್ನು ನೆರವೇರಿಸಲು ಆಗಮಿಸಿದ್ದ ಶ್ರೀ ಕೃಷ್ಣದೇವರಾಯ ವಿಶ್ವವಿದ್ಯಾಲಯದ ನಿವೃತ್ತ ಕನ್ನಡ ಪ್ರಾಧ್ಯಾಪಕರಾದ ಡಾ. ಆರ್. ಶೇಷಶಾಸ್ತ್ರಿಯವರಿಗೆ, ಮುಖ್ಯ ಅತಿಥಿಯಾಗಿ ಆಗಮಿಸಿದ್ದ ಡಾ. ಕೆ. ಆರ್. ಗಣೇಶ್ ಅವರಿಗೆ ಹಾಗೂ ಸಭೆಯಲ್ಲಿ ಹಾಜರಿದ್ದ ನಿವೃತ್ತ ಕನ್ನಡ ಪ್ರಾಧ್ಯಾಪಕರುಗಳಿಗೆ ಮತ್ತು ತರಗತಿಯ ಜಾಲತಾಣದ ಎಲ್ಲಾ ವಿದ್ಯಾರ್ಥಿಗಳಿಗೆ ' ಡಾ. ಬಿ.ಸಿ. ರಾಜಕುಮಾರ್ ಅವರು ಸ್ವಾಗತ ಕೋರಿ, ಅತಿಥಿಗಳ ಸಂಕ್ಷಿಪ್ತ ಪರಿಚಯ ಮಾಡಿದರು.

ದೀಪ ಬೆಳಗಿಸಿ ಈ ಕಾರ್ಯಕ್ರಮವನ್ನು ವಿಧ್ಯುಕ್ತವಾಗಿ ಉದ್ಘಾಟಿಸಿದ ಡಾ. ಶೇಷಶಾಸ್ತ್ರಿಯವರು, ಪ್ರತಿಷ್ಠಾನವು ನುರಿತ ಕನ್ನಡ ವಿದ್ವಾಂಸರಿಂದ ಮತ್ತು ಶಾಸನ ತಜ್ಞರಿಂದ ಹಳಗನ್ನಡ ಡಿಪ್ಲೊಮಾ ಮತ್ತು ಕಾವ್ಯಾಭ್ಯಾಸ ಶಿಬಿರಗಳನ್ನು ಬಹಳ ಯಶಸ್ವಿಯಾಗಿ ನಡೆಸಿಕೊಂಡು ಬರುತ್ತಾ ಇದೆ. ಸಾಹಿತ್ಯಾಸಕ್ತರೇ ಈ ತರಗತಿಗಳಲ್ಲಿ ಪಾಲ್ಗೊಳ್ಳುತ್ತಿರುವುದು ಬಹಳ ವಿಶೇಷವೆಂದರು. ಸ್ವ ಆಸಕ್ತಿಯಿಂದ ಹಳಗನ್ನಡ ಅಭ್ಯಾಸ ಮಾಡುವ ಉದ್ದೇಶದಿಂದ ಬಂದಿರುವ ನೀವೆಲ್ಲರೂ ಛಂದಸ್ಸು, ಅಲಂಕಾರ, ಉಪಮಾನ–ಉಪಮೇಯ, ರೂಪಕಗಳ, ಮತ್ತಿತರ ಪರಿಕರಗಳನ್ನು ಬಳಸಿ ಅಭ್ಯಾಸ ನಡೆಸಬೇಕೆಂದು ಸಲಹೆ ನೀಡಿದರು. ಈ ವಿವಿಧ ಪರಿಕರಗಳ ಪರಿಚಯ ಮತ್ತು ಅಗತ್ಯಗಳನ್ನು ಸಂದರ್ಭಸಹಿತವಾಗಿ ಕೆಲವು ಉದಾಹರಣೆಗಳಿಂದ ತಿಳಿಸಿದರು.

ಡಾ. ಕೆ. ಆರ್. ಗಣೇಶ್ ಅವರು ಹಳಗನ್ನಡ ಮತ್ತು ಶಾಸನಗಳನ್ನು ಅಭ್ಯಸಿಸುವರೆಲ್ಲರೂ ತರಗತಿಯ ವೈಶಿಷ್ಟ್ಯತೆಯನ್ನು ಮತ್ತು ನಿಯಮಗಳನ್ನು ತಪ್ಪದೆ ಪಾಲಿಸಬೇಕಾಗುವುದರ ಬಗ್ಗೆ ತಿಳಿ ಹೇಳಿದರು. ತರಗತಿಯಲ್ಲಿನ ಪಾಠಗಳನ್ನು ಕೇಳಿದರೆ ಸಾಲದು. ವೈಯಕ್ತಿಕ ಅಭ್ಯಾಸವೂ ಅವಶ್ಯಕವೆಂದು ತಿಳಿಸಿ, ಮನೆಯಲ್ಲೂ ಅಭ್ಯಾಸ ಮಾಡುವ ದೃಷ್ಟಿಯಿಂದ ಕೊಡುವ ಹೋಮ್ ವರ್ಕ್ ಗಳನ್ನೂ ಮಾಡಬೇಕಾಗುವುದೆಂದರು. ವಿದ್ಯಾರ್ಥಿಗಳು ಹಳಗನ್ನಡ ನಿಘಂಟು, ಪುರಾಣನಾಮ, ಚೂಡಾಮಣಿ, ಶ್ರೀವತ್ಸ ನಿಘಂಟು ಮುಂತಾದ ಗ್ರಂಥಗಳನ್ನು ಬಳಸುವಲ್ಲಿನ ಅಗತ್ಯ ಮತ್ತು ಆಸಕ್ತಿಯನ್ನು ರೂಢಿಸಿಕೊಳ್ಳಲು ಸೂಚಿಸಿದರು. ಪದ ವಿಭಾಗ ಮಾಡುವ ಕ್ರಮ, ಅರ್ಥೈಸುವಿಕೆ, ದೇಸಿ ಪದಗಳ ಪರಿಚಯ, ಸಂಸ್ಕೃತ ಪದಗಳ ಸ್ವರೂಪ, ತತ್ಸಮ– ತದ್ಭವ, ತ್ರಿಪದಿ, ಚೌಪದಿ, ಮುಂತಾದವುಗಳ ಬಗೆಗಿನ ಜ್ಞಾನವೂ ಮುಖ್ಯವೆಂದರು. ಹಳಗನ್ನಡ ಕಾವ್ಯಗಳ ಮೇಲಿನ ಪ್ರೀತಿಯಿಂದ ಮತ್ತು ತಮ್ಮ ಜ್ಞಾನದ ಅರಿವನ್ನು ಹೆಚ್ಚಿಸಿಕೊಳ್ಳುವ ಸಲುವಾಗಿ ನೊಂದಾಯಿಸಿರುವ ಎಲ್ಲ ವಿದ್ಯಾರ್ಥಿಗಳನ್ನು ಅಭಿನಂದಿಸಿ, ಪ್ರಾಧ್ಯಾಪಕರೆಲ್ಲರ ಸೇವೆಯನ್ನು ಸಮರ್ಪಕವಾಗಿ ಬಳಸಿಕೊಳ್ಳಲು ಕರೆ ನೀಡಿದರು.




ಡಾ. ಆರ್. ಲಕ್ಷ್ಮೀನಾರಾಯಣ ಅವರು, ಅತಿಥಿಗಳ ವಿದ್ವತ್ ಸಾಧನೆಗಳನ್ನು ದೀರ್ಘವಾಗಿ ಪರಿಚಯ ಮಾಡಿಕೊಟ್ಟರು. ಬಿ.ಎಂ.ಶ್ರೀ ಪ್ರತಿಷ್ಠಾನವು ಹಳಗನ್ನಡ ಕಾವ್ಯಾಭ್ಯಾಸ ಮತ್ತು ಶಾಸನಗಳ ಡಿಪೊಮಾ ತರಗತಿಗಳನ್ನು ಯಶಸ್ವಿಯಾಗಿ ನಡೆಸಿಕೊಂಡು ಬರುತ್ತಿರುವುದು. ಎಲ್ಲರಿಗೂ ತಿಳಿದ ವಿಷಯವೇ. ಹೆಚ್ಚಿನ ಸಂಖ್ಯೆಯಲ್ಲಿ ವಿದ್ಯಾರ್ಥಿಗಳು ಈ ತರಗತಿಗಳಲ್ಲಿ ಭಾಗವಹಿಸುತ್ತಿದ್ದಾರೆ. ಇವರೆಲ್ಲರೂ ಕಾಲೇಜಿನ ವಿದ್ಯಾರ್ಥಿಗಳಲ್ಲ. ಬಹುತೇಕರು ಇಂಜಿನಿಯರ್‌ಗಳು, ಗೃಹಿಣಿಯರು ಮತ್ತು ಹಿರಿಯ ನಾಗರಿಕರು. ಯಾವ ಡಿಗ್ರಿ ಅಥವಾ ಪರೀಕ್ಷೆಗಾಗಿ ಇವರುಗಳು ಅಧ್ಯಯನ ಮಾಡುತ್ತಿಲ್ಲ. ಕೇವಲ ಹಳಗನ್ನಡ ಕಾವ್ಯಗಳನ್ನು ಓದಿ ಆನಂದ ಪಡುವ ಸಲುವಾಗಿ ಅರ್ಥ ಮಾಡಿಕೊಳ್ಳಲು ಮತ್ತು ಆ ಕಾಲಘಟ್ಟದ ಕವಿಗಳನ್ನು ಮತ್ತು ಅವರ ವಿದ್ವತ್ತನ್ನು ಅರಿಯುವ ದೃಷ್ಟಿಯಿಂದ ನಮ್ಮ ತರಗತಿಗಳಿಗೆ ಬರುತ್ತಿರುವುದು ಒಂದು ಹೆಮ್ಮೆಯ ವಿಷಯ. ಬಹುಶಃ ಬೆಂಗಳೂರಿನಲ್ಲಿ ಹಳಗನ್ನಡ ಕಾವ್ಯಾಭ್ಯಾಸ ಶಿಬಿರಗಳನ್ನು ನಡೆಸಿಕೊಂಡು ಬರುತ್ತಿರುವುದು ಪ್ರತಿಷ್ಠಾನವೊಂದೇ. ಇಲ್ಲಿ ಹಳಗನ್ನಡ ತರಗತಿಗಳನ್ನು ನಡೆಸಲು, ಪರಿಣಿತರ ತಂಡವೇ ಇರುವುದಾಗಿ, ಡಾ. ಆರ್. ಲಕ್ಷ್ಮೀನಾರಾಯಣ ಅವರು ತಿಳಿಸಿದರು.

೧೭-೦೮-೨೦೨೧

## ಶ್ರೀಮತಿ ರುಕ್ಮಿಣ್ಮಮ ಶ್ರೀ ಬಿ.ಎಸ್. ಸೀತಾರಾಮರಾವ್ ದತ್ತಿ ಕಾರ್ಯಕ್ರಮ

### ಉಪನ್ಯಾಸ : ವಿಷಯ : ಕನ್ನಡ ಸಾಹಿತ್ಯದಲ್ಲಿ ಪರಂಪರೆ ಮತ್ತು ಪ್ರತಿಭಟನೆ

**ಉಪನ್ಯಾಸಕರು : ಡಾ. ಎಚ್. ದಂಡಪ್ಪ , ಖ್ಯಾತ ವಿಮರ್ಶಕರು**

ಆರ್. ಲಕ್ಷ್ಮೀನಾರಾಯಣ ಅವರು ತಮ್ಮ ಪ್ರಸ್ತಾವನಾ ನುಡಿಗಳಲಿ– ಶ್ರೀ ಬಿ. ಎಸ್. ಸೀತಾರಾಮರಾವ್ ಅವರು ಸಣ್ಣ ಸ್ವಂತ ಉದ್ಯೋಗ ಹೊಂದಿದ್ದವರು. ಅವರಿಗೆ ಕನ್ನಡ, ನಾಡು, ನುಡಿಯ ಬಗ್ಗೆ ಅಪಾರ ಅಕ್ಕರೆ ಮತ್ತು ಕಾಳಜಿ ಇತ್ತು. ಅವರ ಮಗ ಶ್ರೀ ಬಿ.ಎಸ್. ಗೋಪಾಲಕೃಷ್ಣ ಅವರು ಎಲ್ಐ ಸಿಯಿಂದ ನಿವೃತ್ತಿ ಹೊಂದಿ ನಮ್ಮ ಪ್ರತಿಷ್ಠಾನದಲ್ಲಿ ಸದಸ್ಯರಾಗಿ ತಮ್ಮ ಮಾತಾಪಿತೃಗಳ ನೆನಪಿಗಾಗಿ ಮೇಲಿನ ದತ್ತಿಯನ್ನು ಸ್ಥಾಪಿಸಿದ್ದಾರೆ.

ಡಾ. ದಂಡಪ್ಪನವರನ್ನು ಪರಿಚಯಿಸುತ್ತ, ಕರ್ನಾಟಕ ಸರಕಾರದ ಉನ್ನತ ಮಟ್ಟದ ಅಧಿಕಾರಿಯಾಗಿ ಸೇವೆ ಸಲ್ಲಿಸಿ(ಕೆ. ಎ. ಎಸ್) ನಿವೃತ್ತರಾದವರು. ತಮ್ಮ ಅಮೂಲ್ಯ ಸಮಯವನ್ನು ಮುಖ್ಯವಾಗಿ ಕೃತಿರಚನೆ, ವಿವಿಧ ಸಾಹಿತ್ಯ ಪ್ರಕಾರಗಳಲ್ಲಿ ಪ್ರಕಟವಾಗುವ ಕೃತಿಗಳ ವಿಮರ್ಶೆಯಲ್ಲಿ ವಿನಿಯೋಗಿಸುತ್ತಿದ್ದು ,ದಿನ ಪತ್ರಿಕೆಗಳಲ್ಲಿ ಮತ್ತು ಸಾಹಿತ್ಯಿಕ ವಲಯಗಳಲ್ಲಿ ಹೆಸರಾಗಿರುವ ನಿಯತಕಾಲಿಕೆಗಳಲ್ಲಿ ಇವರ ವಿಮರ್ಶಾ ಲೇಖನಗಳು ಎಲ್ಲರಿಗೂ ಚಿರಪರಿಚಿತವಾಗಿವೆ. ಭ್ರಮರ ಮತ್ತು ಕೀಟ, ಚಕೋರ ಮತ್ತು ಚಂದ್ರಮ, ಪ್ರಕೃತಿ ಮತ್ತು ಸಂಸ್ಕೃತಿ ಮೊದಲಾದ ವಿಮರ್ಶಾಲೇಖನಗಳ ಸಂಕಲನವನ್ನು ಪ್ರಕಟಿಸಿರುವುದರ ಜೊತೆಗೆ ಜಾಗತಿಕ ವಿಚಾರ ಸಾಹಿತ್ಯ, ಭಾರತೀಯ ವಿಚಾರ ಸಾಹಿತ್ಯ, ಹೊನ್ನಾರೆಉ ಮೊದಲಾದ ಗ್ರಂಥಗಳನ್ನು ಸಂಪಾದಿಸಿಕೊಟ್ಟಿದ್ದಾರೆ ಎಂದು  ಹೇಳಿ ಎಲ್ಲರನ್ನೂ ಕಾರ್ಯಕ್ರಮಕ್ಕೆ ಸ್ವಾಗತಿಸಿದರು.

ದಂಡಪ್ಪನವರು ತಮ್ಮ ಭಾಷಣವನ್ನು ಪರಂಪರೆ ಎಂದರೇನು ಎಂಬ ಪ್ರಶ್ನೆಯಿಂದ ಆರಂಭಿಸಿ ಯಾವುದು ಅನಾದಿಯಿಂದ ಆಚರಣೆಯಲ್ಲಿದೆಯೋ , ನಡೆದುಕೊಂಡುಬಂದಿದೆಯೋ, ಅವುಗಳನ್ನು ಪರಂಪರೆ ಎನ್ನಬಹುದು ಎಂದು ಹೇಳಿದರು. ಪಂಪ ಪೂರ್ವ ಕಾಲದಿಂದಲೂ ಸಾಹಿತ್ಯಕ ಪರಂಪರೆಯ ನೆಲೆಗಳನ್ನು ಹಾಗು ಪ್ರತಿರೋಧವನ್ನು ಗುರುತಿಸಿ ಉಲ್ಲೇಖಿಸುತ್ತ ಆಗಿನ ಕಾಲಘಟ್ಟದಲ್ಲಿ ಕವಿಗಳು, ಸಾಹಿತ್ಯ ರಚಿಸುವವರು, ಪರಂಪರೆಯ ಕಟ್ಟುಪಾಡಿಗೆ ಒಳಗಾದದ್ದನ್ನು ಕೆಲವು ಕೆಲವು ಸನ್ನಿವೇಶಗಳ ಮೂಲಕ ಉದಾಹರಿಸಿದರು. ಕವಿಗಳು ಪರಂಪರೆಯನ್ನು ಗಮನದಲ್ಲಿರಿಸಿಕೊಂಡು  ಸಾಹಿತ್ಯಕೃಷಿಯಲ್ಲಿ ತೊಡಗಿಕೊಂಡರೂ ಪರಂಪರೆ ಸಾಗಿಬಂದ ಹಾದಿಯಲ್ಲೇ ಪ್ರತಿಭಟನೆ, ಪ್ರತಿರೋಧನ್ನು ನಾವು ಕಾಣುತ್ತೇವೆ. ಸಾಹಿತ್ಯ ಚಳುವಳಿ ಜನ್ಮ ತಾಳುವುದು ಪ್ರತಿಭಟನೆಯ ಕಾವಿನಿಂದಲೇ ಅಲ್ಲವೆ? ಮಧ್ಯಯುಗೀನ ಕರ್ನಾಟಕದ ಜನಜೀವನ, ಮತಧರ್ಮಸಂಬಂಧಿಯಾದ ನೀತಿ ನಿಯಮಗಳಿಂದ ನಿಯಂತ್ರಿತವಾಗುತ್ತಿದ್ದ ಕಾಲಘಟ್ಟವನ್ನು ಮರೆಯಲಾದೀತೆ? ಮನುಷ್ಯ ಕೇಂದ್ರಿತ ವಿಚಾರಗಳು ಪರಂಪರೆಯಾಗಿ ಬೆಳೆಯುತ್ತ ಬಂದಿವೆ. ಆದರೆ ಅವು ಪ್ರತಿರೋಧಗಳಿಂದ ಹೊಸ ಹೊಸ ರೂಪಗಳನ್ನು, ಆಕೃತಿಗಳನ್ನು,  ವಸ್ತುಗಳನ್ನು ಪಡೆದಿವೆ.. ಪರಂಪರೆಯೆನ್ನುವುದು ಒಂದು ಕಡೆಯಿಂದ ಮತ್ತೊಂದು ಕಡೆಗೆ ಸಾಗುತ್ತ ನಿರಂತರ ಚಲನಶೀಲತೆಯಿಂದ ಕೂಡಿರುತ್ತದೆ.  ಅದೇ ಸಂಪ್ರದಾಯವು ಜಡತ್ವವನ್ನು ಹೊಂದಿರುತ್ತದೆ. ಸಾಹಿತ್ಯವೂ ಒಂದು ಪರಂಪರೆಯಾಗಿ ಉಳಿದುಕೊಂಡುಬಂದಿದೆ. ಈಗಿನ ಬರಹಗಾರರು ಪರಂಪರೆಯನ್ನು ಅರಿತು–ಕೊಂಡು ಸಾಹಿತ್ಯ ಸೃಷ್ಟಿಸಬೇಕು. ಪರಂಪರೆಯ ಪ್ರತಿರೋಧದಿಂದಲೇ ಹೊಸ ಸಾಹಿತ್ಯ ಚಳುವಳಿ ಹುಟ್ಟಿರುವುದು ಎಂದು ಅಭಿಪ್ರಾಯಪಟ್ಟರು.

**ಕಿರುಪರಿಚಯ**

### ಪ್ರೊ. ಶಿವರಾಮಯ್ಯ



೧೯೪೦ರಲ್ಲಿ ಹುಟ್ಟಿದ ಶಿವರಾಮಯ್ಯ ಅವರು ತುಮಕೂರಿನಲ್ಲಿ ಬಿ.ಎ, ಮೈಸೂರಿನಲ್ಲಿ ಕನ್ನಡ ಎಂ.ಎ ಪದವಿ ಪಡೆದರು. ೧೯೬೬ರಲ್ಲಿ ಕೊಳ್ಳೇಗಾಲದ ಸರ್ಕಾರಿ ಕಾಲೇಜಿನಲ್ಲಿ ಅಧ್ಯಾಪಕ ವೃತ್ತಿಯನ್ನು ಆರಂಭಿಸಿ ಬೆಂಗಳೂರು, ತುಮಕೂರು, ಮಾಲೂರು ಕಾಲೇಜುಗಳಲ್ಲಿ ಕೆಲಸಮಾಡಿ, ಬಾಗಲಕೋಟೆ ಜಿಲ್ಲೆ ಬೀಳಗಿಯಲ್ಲಿ ಪ್ರಾಂಶುಪಾಲರಾಗಿ ೧೯೯೮ರಲ್ಲಿ ನಿವೃತ್ತಿ ಹೊಂದಿದರು. ಕಳೆದ ೫೦ ವರ್ಷಗಳಿಂದಲೂ ಅಧ್ಯಯನ, ಅಧ್ಯಾಪನ ವೃತ್ತಿಯೊಂದಿಗೆ ಹಾಗೂ ಜನಪರ ಸಂಘಟನೆಗಳೊಂದಿಗೆ ಗುರ್ತಿಸಿಕೊಂಡು ಸಕ್ರಿಯ ಹೋರಾಟಗಳಲ್ಲಿ ಭಾಗವಹಿಸುತ್ತ ಬಂದ ಇವರ ನಿಲುವು ಯುವಜನತೆಗೆ ಸ್ಫೂರ್ತಿದಾಯಕ. ನಮ್ಮ ನಾಡಿನ ಭಾಷೆ, ಸಾಹಿತ್ಯ, ಸಂಸ್ಕೃತಿ, ಸಿನಿಮಾ ಮೊದಲಾದವುಗಳನ್ನು ಕುರಿತು ಆಗಾಗ್ಗೆ ಬರೆಯುತ್ತ, ಪ್ರತಿಕ್ರಿಯಿಸುತ್ತ ಬಂದವರು, ಸಾಮಾಜಿಕ ಪ್ರಜ್ಞೆಯ ತಳಹದಿಯ ಮೇಲೆ ಸಾಹಿತ್ಯಿಕ–ಸಾಂಸ್ಕೃತಿಕ ವಿಷಯಗಳ ಚರ್ಚೆಯನ್ನು ಸದ್ದಿಲ್ಲದೆ ಬೆಳೆಸುತ್ತ ಆ ಮುಖಾಂತರ ಜನಪರ ವಿಚಾರಧಾರೆಗಳನ್ನು, ಆರೋಗ್ಯಕರ ನಿಲುವುಗಳನ್ನು ತಾಳುತ್ತ ಬದುಕಿನ ಬಗೆಗೆ ಪ್ರೀತಿಯನ್ನು ಮೂಡಿಸಿದವರು. ಇವರ ವಿಮರ್ಶಾ ಸಂಕಲನಗಳಲ್ಲಿರುವ ಪ್ರಾಚೀನ ಮತ್ತು ಅರ್ವಾಚೀನ ಕನ್ನಡ ಸಾಹಿತ್ಯಕ್ಕೆ ಸಂಬಂಧಿಸಿದ ಅನೇಕ ಲೇಖನಗಳು ಕೇವಲ ರಸ ವಿಮರ್ಶೆಯಾಗಿರದೆ ಸಾಂಸ್ಕೃತಿಕ ಒಳನೋಟಗಳ ಮೂಲಕ ಪ್ರಸ್ತುತ ಸಂದರ್ಭದ ಒತ್ತಾಸೆಯನ್ನು ಧ್ವನಿಸುತ್ತವೆ.

ಸಾಹಿತ್ಯ ಪರಿಸರ, ಇಮ್ಮಾವು, ಉರಿಯ ಉಯ್ಯಾಲೆ, ಅಂತರ್ಜಲ, ಸಂಸ್ಕೃತಿ ವಿನ್ಯಾಸ, ಮನುಷ್ಯ ಜಾತಿ ತಾನೊಂದೆ ವಲಂ, ನೀಲ ಕುರಂಜಿ, ದಲಿತ ಸಾಹಿತ್ಯ ಸಂವೇದನೆ ಮುಂತಾಗಿ ಹನ್ನೆರಡು ವಿಮರ್ಶಾ ಸಂಕಲನಗಳು; ಸ್ವಪ್ನ ಸಂಚಯ, ನಾವು ಕಟ್ಟಿದ ಸ್ವರ್ಗ, 'ಬಣ್ಣದ ಹುಳು' ಮೊದಲಾದ ಕವನ ಸಂಕಲನಗಳು; ನಾಡೋಜ ಪಂಪ ಎಂಬ ನಾಟಕ; ನಟ ನಾಡೋಜ ರಾಜಕುಮಾರ್, ಟಿಪ್ಪು ಸುಲ್ತಾನ್, ಬಯಲ ಪ್ರಬಂಧಗಳು; ವೇಶ್ಯೆಯರು ಮತ್ತು ಲೈಗಿಂಕ ಅಲ್ಪಸಂಖ್ಯಾತರು; ಗ್ರಾಮೀಣ ಸಂಸ್ಕೃತಿ ಸಂದರ್ಭ ಕೋಶ(ಚಂಪೂ), ಕುದುರೆಮುಖ, ದನಿ ಇಲ್ಲದವರ ದನಿ, ಸಾಹಿತ್ಯ ಮತ್ತು ಚರಿತ್ರೆ, ಪಂಪ ಭಾರತ ಒಂದು ಅಧ್ಯಯನ (೨ಭಾಗ) ಮೊದಲಾದ ಮೂವತ್ತೈದಕ್ಕೂ ಹೆಚ್ಚು ಕೃತಿಗಳನ್ನು ರಚಿಸಿರುತ್ತಾರೆ.

## ಪುಸ್ತಕ ಬಿಡುಗಡೆ

೨೧-೮-೨೦೨೧ರಂದು ವಸಂತ ಪ್ರಕಾಶನ ಮತ್ತು ಸಿವಿಜಿ ಪಬ್ಲಿಕೇಷನ್ಸ್ ಅವರ ಸಂಯುಕ್ತ ಆಶ್ರಯದಲ್ಲಿ ಬಿಎಂಶ್ರೀ ಪ್ರತಿಷ್ಠಾನದಲ್ಲಿ ನಡೆದ ಪುಸ್ತಕ ಬಿಡುಗಡೆ ಕಾರ್ಯಮಕ್ರಮದಲ್ಲಿ ಖ್ಯಾತ ಸಾಹಿತಿ ಬರಗೂರು ರಾಮಚಂದ್ರಪ್ಪನವರು ಡಾ. ಆರ್ ಲಕ್ಷ್ಮೀನಾರಾಯಣ ಅವರ 'ಮುಗಿಯದ ಮಾಯೆ' ಕಾದಂಬರಿ ಮತ್ತು 'ಹಲವು ಭೂಮಿ ಹಲವು ಬಣ್ಣ' ಎಂಬ ಖ್ಯಾತ ಸ್ವದೇಶೀ ಮತ್ತು ವಿದೇಶೀ ಕಥೆಗಳ



ಸಂಕಲನವನ್ನು ಬಿಡುಗಡೆ ಮಾಡಿದರು.

ಖ್ಯಾತ ವಿಮರ್ಶಕ ಡಾ.ಎಚ್. ದಂಡಪ್ಪನವರು ಕಾದಂಬರಿ ಕುರಿತು ಮತ್ತು ಖ್ಯಾತ ಕಥೆಗಾರ ಕಂನಾಡಿಗಾ ನಾರಾಯಣ ಅವರು ಕಥಾಸಂಕಲನ ಕುರಿತು ಮಾತನಾಡಿದರು

# ಬಿಎಂಶ್ರೀ ಪ್ರತಿಷ್ಠಾನ ನಡೆದು ಬಂದ ದಾರಿ

ಬಿ.ಆರ್. ರವೀಂದ್ರನಾಥ

## ಪ್ರಾರಂಭ ಪೂರ್ವದಲ್ಲಿ

ಅನುಚೂನವಾಗಿ ಸಂಸ್ಥೆಗಳು ಉದಯವಾಗುತ್ತಲೇ ಇರುತ್ತವೆ ಎಂಬುದನ್ನು ನಾವೆಲ್ಲರೂ ಬಲ್ಲೆವು. ಆದರೆ ಎಲ್ಲ ಸಂಸ್ಥೆಗಳೂ ಯಶಸ್ವಿಯಾಗಿ ನಡೆಯುವುದಿಲ್ಲ. ಕೆಲವು ಸಂಸ್ಥೆಗಳು ಪ್ರಾರಂಭದಿಂದಲೇ ಕುಂಟುತ್ತಾ ಸಾಗಿ ಬಹು ಬೇಗನೆ ನಿಷ್ಕ್ರಿಯಗೊಳ್ಳುವುದನ್ನೂ ನಾವು ನೋಡ್ಡಿದ್ದೇವೆ. ಮತ್ತಷ್ಟು ಸಂಸ್ಥೆಗಳು ಉಲ್ಕೆ ಮಾದರಿಯಲ್ಲಿ ಅಲ್ಪ ಕಾಲ ಮಿಂಚಿ ಮಾಯವಾಗಿಬಿಡುತ್ತವೆ. ಕೆಲವು ಸಂಸ್ಥೆಗಳಲ್ಲಿ ಪಟ್ಟಭದ್ರ ಹಿತಾಸಕ್ತಿಗಳು ಸೇರಿಕೊಂಡು ಸಂಸ್ಥೆಯ ಪ್ರಗತಿಗೆ ಅಡ್ಡಗಾಲು ಹಾಕುತ್ತವೆ. ಬಹಳಷ್ಟು ಸಂಸ್ಥೆಗಳ ರೂವಾರಿಗಳಿಗೆ ತಮ್ಮ ಮುಂದಿನ ಹಾದಿಯ ಬಗ್ಗೆ ಸ್ಪಷ್ಟತೆ ಇಲ್ಲದ ಕಾರಣ ಸಂಸ್ಥೆಗಳು ಸೊರಗುತ್ತವೆ. ಬಹುತೇಕ ಸಂಸ್ಥೆಗಳು ತಮ್ಮ ಸ್ಥಾಪಕರು ಸಮರ್ಥರಾಗಿ ಕೆಲಸಗಳನ್ನು ನಡೆಸಿದಷ್ಟು ಕಾಲ ಮಾತ್ರ ಸಕ್ರಿಯವಾಗಿದ್ದು ನಂತರ ಅವಸಾನ ಕಾಣುತ್ತವೆ. ಮೊದಲ ಪೀಳಿಗೆ ಪ್ರವರ್ತಕರ ನಂತರವೂ ಯಶಸ್ವಿಯಾಗಿ ಮುನ್ನಡೆಯುತ್ತಿರುವ ಸಂಸ್ಥೆಗಳ ಸಂಖ್ಯೆ ಬಹಳ ಕಡಿಮೆ ಎಂದು ಲೋಕ ಕಂಡಿರುವವರಿಗೆ ಮನದಟ್ಟಾಗಿರುತ್ತದೆ. ಬಿ.ಎಂ.ಶ್ರೀ ಪ್ರತಿಷ್ಠಾನ ಅಂತಹ ಒಂದು ಸಂಸ್ಥೆ.

ಪ್ರೊಫೆಸರ್. ಎಂ ವೀ ಸೀತಾರಾಮಯ್ಯ ಅವರು ೧೯೩೩ ರಲ್ಲಿ ಕನ್ನಡ ಎಂ.ಎ. ಪದವಿಯನ್ನು ಮೈಸೂರು ವಿಶ್ವವಿದ್ಯಾನಿಲಯದಿಂದ ಪಡೆದರು. ಆಗ ಕೆಲಸ ಸಿಕ್ಕುವುದು ಕಷ್ಟವಾಗಿತ್ತು. ಕಾಲೇಜು ಅಧ್ಯಾಪಕ ಹುದ್ದೆಗೆ ಅವರು ಅರ್ಹತೆಯನ್ನು ಪಡೆದಿದ್ದರೂ ಆಗ ಇದ್ದ ಕಾಲೇಜುಗಳಲ್ಲಿ ಕನ್ನಡ ಅಧ್ಯಾಪಕ ಹುದ್ದೆ ದೊರಕಲು ಸಾಕಷ್ಟು ಸಮಯ ಹಿಡಿಯಿತು. ಉತ್ಸಾಹಿ ನವತರುಣ ಎಂವೀಸೀ ತಮ್ಮ ಪ್ರತಿಭೆಯನ್ನು ತೋರಿಸಲು ಇತರ ಅವಕಾಶಗಳನ್ನು ಹುಡುಕಿದಾಗ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿಯೇ ಉದ್ಯೋಗ ದೊರಕಿತು. ಹಾಗಾಗಿ ಅವರು ೧೯೩೪ ರಿಂದ ೧೯೩೯ ರವರೆಗೆ ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯದರ್ಶಿಯಾಗಿ ಕೆಲಸ ನಿರ್ವಹಿಸಿದರು. ಆಗ ಆ ಕೆಲಸಕ್ಕೆ ಸಂಭಾವನೆಯಿತ್ತು. ಅವರು ಕಾರ್ಯಕ್ರಮಗಳ ಏರ್ಪಾಟು, ಪತ್ರವ್ಯವಹಾರ, 'ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ'ಯ ಸಂಪಾದನ ಕಾರ್ಯದಲ್ಲಿ ನೆರವು ಮುಂತಾದ ಅನೇಕ ಕಾರ್ಯಗಳನ್ನು ನಿರ್ವಹಿಸುತ್ತಿದ್ದುದರಿಂದ ಅವರಿಗೆ ಈ ವಿಷಯಗಳಲ್ಲಿ ಸಾಕಷ್ಟು ಅನುಭವ ದೊರೆಯಿತು. ಅವರ ಸ್ಥಾನದ ಬಲದಿಂದ ಅವರಿಗೆ ಕನ್ನಡನಾಡಿನ ಮುಖ್ಯ ಸಾಹಿತಿಗಳೊಡನೆ ಪರಿಚಯ ಮತ್ತು ಸಂಪರ್ಕ ಸಾಧ್ಯವಾಯಿತು. ಈ ಅವಧಿಯಲ್ಲಿ ಅವರಿಗೆ ಕನ್ನಡ ಸಾಹಿತ್ಯ ಲೋಕದ ಚಿತ್ರಣ ದೊರೆತು ಸಮಸ್ಯೆಗಳು ಮತ್ತು ಅವಕಾಶಗಳ ಬಗ್ಗೆ ಸ್ವಲ್ಪ ಮಟ್ಟಿನ ಅರಿವು ಉಂಟಾಯಿತು. ಜೊತೆಗೆ ಅವರು ಮಾಡುತ್ತಿದ್ದ ಕೆಲಸ ಎಲ್ಲರ ಮೆಚ್ಚುಗೆಗೆ ಪಾತ್ರವಾಗಿ ಅವರ ಬಗ್ಗೆ ಎಲ್ಲರಲ್ಲೂ ಸದಭಿಪ್ರಾಯ ಮೂಡಲು ಸಾಧ್ಯವಾಯಿತು. ಮುಂದೆ ಮೈಸೂರು ವಿಶ್ವವಿದ್ಯಾನಿಲಯದ ನೇತೃತ್ವದಲ್ಲಿ ನಡೆಯುತ್ತಿದ್ದ ಇಂಗ್ಲಿಷ್–ಕನ್ನಡ ನಿಘಂಟಿನ ಕೆಲಸಕ್ಕೆ ಅವರನ್ನು ನಿಯೋಜಿಸಲಾಯಿತು. ಆ ಹುದ್ದೆಯಲ್ಲಿ ಅವರು ೧೯೩೯ ರರಿಂದ ೧೯೪೬ ರವರೆಗೆ ಕೆಲಸ ನಿರ್ವಹಿಸಿದರು. ಈ ಅವಧಿಯಲ್ಲಿ ಅವರಿಗೆ ಸಾಹಿತ್ಯ ಕ್ಷೇತ್ರದ ಬಗ್ಗೆ ಹೆಚ್ಚಿನ ಅರಿವು ಉಂಟಾಯಿತು ಹಾಗೂ ಬಹಳಷ್ಟು ಮಹನೀಯರ ಪರಿಚಯವಾಯಿತು. ೧೯೪೬ ರಲ್ಲಿ ಅವರು ಬೆಂಗಳೂರಿನ ಸರ್ಕಾರಿ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರಾಗಿ ನೇಮಕಗೊಂಡರು.

ಕಾಲೇಜು ಕನ್ನಡ ಸಂಘ ಬೆಂಗಳೂರಿನ ಸರ್ಕಾರಿ ಕಾಲೇಜಿನಲ್ಲಿ ಕನ್ನಡ ಸಂಘವನ್ನು ಜಿ.ಪಿ. ರಾಜರತ್ನಂ ಅವರು ಹುಟ್ಟು ಹಾಕಿ ಅನೇಕ ಒಳ್ಳೆಯ ಕಾರ್ಯಕ್ರಮಗಳನ್ನು ನಡೆಸಿದ್ದರು, ೧೯೫೩ ರಲ್ಲಿ ಅವರಿಂದ ಸಂಘದ ಕಾರ್ಯಭಾರವನ್ನು ಎಂವೀಸೀ ವಹಿಸಿಕೊಂಡರೂ ಅದು ಒಂದು ವರ್ಷ ಕಾರ್ಯ ನಿರ್ವಹಿಸಿದ ಬಳಿಕ ನಿಷ್ಕ್ರಿಯವಾಯಿತು. ಮುಂದೆ ೧೯೫೯ ರಲ್ಲಿ ಕನ್ನಡ ಸಂಘವನ್ನು ಎಂವಿಸೀ ಪುನರಾರಂಭಿಸಿ ತಮ್ಮ ನಿವೃತ್ತಿಯವರೆಗೂ ಅದರ ವತಿಯಿಂದ ಅನೇಕ ಚಟುವಟಿಕೆಗಳನ್ನು ನಡೆಸಿದರು. ವಿದ್ಯಾರ್ಥಿಗಳಲ್ಲಿನ ಸುಪ್ತ ಸಾಹಿತಾಸಕ್ತಿಗೆಳಿಗೆ ನೀರೆರೆದು ಪೋಷಿಸಿದ ಈ ಸಂಘವು ಮುಂದೆ ಅನೇಕ ಚರ್ಚಾಪಟುಗಳು, ಲೇಖಕರು ಮೂಡಿಬರಲು ಕಾರಣವಾಯಿತು. ಸಂಘದ ಕಾರ್ಯಕ್ರಮಗಳಿಗೆ ಡಿವಿಜಿ., ಮಾಸ್ತಿ, ಗೋಕಾಕ್, ಗೊರೂರು, ಉಪಾಧ್ಯೆ ಮುಂತಾದ ಹಿರಿಯರನ್ನು ಆಹ್ವಾನಿಸಿದರು. ಅವರ ಕಾಲದಲ್ಲಿ ಸಂಘದ ವತಿಯಿಂದ ಹಲವಾರು ಪ್ರಕಟಣೆಗಳು ಬರಲು ಅವರು ಕಾರಣರಾದರು: ೧೯೬೨ ರಲ್ಲಿ ದೇಶದ ಮೇಲೆ ಚೀನ ಆಕ್ರಮಣ ನಡೆಸಿದಾಗ 'ಸಮರಸಮಯ ಕವಿಸಮ್ಮೇಳನ'ವನ್ನು ಸಂಘ ಆಯೋಜಿಸಿ, ಅದರಲ್ಲಿ ಓದಿದ ಕವನಗಳನ್ನು 'ಹೊಳಪು–ಝುಳಪು' ಎಂಬ ಹೆಸರಿನಲ್ಲಿ ಹೊರತರಲಾಯಿತು. ವಿದ್ಯಾರ್ಥಿಗಳ ಬರವಣಿಗೆಗೆ ಪ್ರೋತ್ಸಾಹ ನೀಡಲು ಸಂಘವು 'ವಿಕಾಸ' ಎಂಬ ಅನ್ವರ್ಥ ಹೆಸರುಳ್ಳ ಸಂಚಿಕೆಯನ್ನು ಪ್ರಕಟಿಸಿತು. ಎಂವೀಸೀ ಅವರು ಸಿದ್ಧಪಡಿಸಿದ್ದ 'ಕವಿರಾಜ ಮಾರ್ಗ'ದ ಆವೃತ್ತಿಯನ್ನು ಕನ್ನಡ ಸಂಘವೇ ಅವರ ನಿವೃತ್ತಿಯ ನಂತರ ಹೊರತಂದಿತು. ಅಂದಿನ ಕಾಲದಲ್ಲಿ ಕನ್ನಡ ಪುಸ್ತಕಗಳ ಪ್ರಕಟಣೆ ಕಷ್ಟಕರವಾಗಿತ್ತು. ಕೆಲವೇ ಪ್ರಕಾಶಕರು ಮಾರುಕಟ್ಟೆಯಲ್ಲಿದ್ದರು. ಲೇಖಕರಿಗೆ ಹೆಚ್ಚಿನ ಪ್ರೋತ್ಸಾಹವಿರುತ್ತಿರಲಿಲ್ಲ. ಪ್ರಕಾಶಕರು ಲೇಖಕರಿಗೆ ಪರಿಪರಿಯ ಕಿರುಕುಳಗಳನ್ನು ನೀಡುತ್ತಿದ್ದರು. ಸಕ್ರಿಯರಾಗಿರುತ್ತಿದ್ದ ಎಂವೀಸೀ ಅವರಿಗೆ ಈ ಬಗ್ಗೆ ರೋಸಿ ಹೋಗಿಯೋ ಏನೋ ೧೯೫೪ ರ ಸುಮಾರಿಗೆ 'ರಾಘವ ಪ್ರಕಾಶನ'ವೆಂಬ ಸ್ವಂತ ಪ್ರಕಟಣಾ ಸಂಸ್ಥೆಯನ್ನು ಹುಟ್ಟುಹಾಕಿದರು. ಈ ಪ್ರಕಾಶನ ಸಂಸ್ಥೆಯ ಮೂಲಕ ಅನೇಕ ಕೃತಿಗಳನ್ನು ಹೊರತಂದರು. ಎಂವೀಸೀ ಅವರಿಗೆ ಅಗಾಧ ಸಾಮರ್ಥ್ಯವಿತ್ತು. ಅವರು ಕೇವಲ ಅಧ್ಯಾಪನ ವೃತ್ತಿಗೆ ಸಂತೃಪ್ತರಾಗಲಿಲ್ಲ. ನಂತರ ಅವರು ಬರಹಗಾರರಾಗಿದಷ್ಟಕ್ಕೆ ಸಂತೃಪ್ತರಾಗಲಿಲ್ಲ. ಅವರಿಗೆ ಮತ್ತಷ್ಟು ಚಟುವಟಿಕೆಗಳನ್ನು ನಡೆಸಬೇಕೆಂಬ ಕನಸುಗಳು ಮತ್ತು ಹಂಬಲಗಳಿದ್ದವು. ಅವಕ್ಕೆ ಪೂರಕವಾಗಿ ಅವರು ದೂರ ದೃಷ್ಟಿ ಹೊಂದಿದ್ದರು. ಅದಕ್ಕೆ ತಕ್ಕನಾಗಿ ಅವರಿಗೆ ಛಲವಿತ್ತು. ಜೊತೆಗೆ ಅವರ ಬಗ್ಗೆ ಗೌರವ ಹೊಂದಿದ್ದವರ ಸಂಖ್ಯೆ ಅಪಾರವಾಗಿತ್ತು. ಅವರಿಗೆ ಆಸ್ತಮಾದ ತೊಂದರೆಯಿದ್ದರೂ, ಅವರ ಓಡಾಟಗಳಿಗೆ ತೊಂದರೆಗಳಿದ್ದರೂ, ಅವರು ಬೆಳೆಸಿಕೊಂಡಿದ್ದ ಆತ್ಮೀಯತೆಗಳಿಂದ ಕನ್ನಡ ಸಾಹಿತ್ಯ ಕ್ಷೇತ್ರದ ಹಲವಾರು ಮಹನೀಯರು ಎಂವೀಸೀ ಅವರಿಗೆ ಹಲವು ರೀತಿಗಳಲ್ಲಿ ಸಹಕರಿಸಿ ನೀಡಿ ಅವರ ಕನಸುಗಳನ್ನು ಸಾಕಾರಗೊಳಿಸಲು ಒತ್ತಾಸೆ ನೀಡುತ್ತಿದ್ದರು.

ಅವರಿಗೆ ಸಂಸ್ಥೆಗಳನ್ನು ಹುಟ್ಟು ಹಾಕುವ ಧೈರ್ಯ, ತಮ್ಮ ಇತರ ಚಟುವಟಿಕೆಗಳ ಜೊತೆಯಲ್ಲಿಯೇ ನಡೆಸಿಕೊಂಡು ಹೋಗುವ ಸಾಮರ್ಥ್ಯ ಮತ್ತು ಸಮಯ, ಸಂಸ್ಥೆಯನ್ನು ನಡೆಸಿಕೊಂಡು ಹೋಗುವಲ್ಲಿ ಬೇಕಾಗುವ ಜನರ ಜೊತೆ ನಿಕಟ ಸಂಪರ್ಕ ಸಾಧಿಸುವುದು, ಎಲ್ಲರ ಜೊತೆ ಹೊಂದಿಕೊಂಡು ಹೋಗುವ ಸೌಜನ್ಯ, ಕಿರಿಯರಿಗೆ ಪ್ರೋತ್ಸಾಹ ನೀಡುವುದು ಎಲ್ಲವೂ ಸಮ ಪ್ರಮಾಣದಲ್ಲಿ ಇದ್ದವು. ಇಂತಹ ಹಿನ್ನಲೆ ಇದ್ದ ಎಂವೀಸೀ ಅವರಿಗೆ ತಮ್ಮ ಮೆಚ್ಚಿನ ಚಟುವಟಿಕೆಗಳು ಶಾಶ್ವತವಾಗಿ ನಡೆಯಲು ಬೇಕಾಗುವ ಒಂದು ಹೊಸ ಸಂಸ್ಥೆಯನ್ನು ಹುಟ್ಟು ಹಾಕುವ ಯೋಚನೆ ಬಂದದ್ದು ಆಶ್ಚರ್ಯಕರವಲ್ಲ. ಬಿಎಂಶ್ರೀ ಅವರು ಎಂವೀಸಿ ಅವರ ಅಚ್ಚುಮೆಚ್ಚಿನ ಗುರುಗಳಾಗಿದ್ದರು. ಬಿಎಂಶ್ರೀ ಅವರು ಕನ್ನಡದ ಏಳಿಗೆಗಾಗಿ ಬಹಳಷ್ಟು ಶ್ರಮಿಸಿದ್ದರು. ೧೯೪೬ರಲ್ಲಿ ಬಿಎಂಶ್ರೀ ಅವರು ತೀರಿಕೊಂಡಿದ್ದರು. ಬಿಎಂಶ್ರೀ ಅವರ ಹೆಸರನ್ನು ಶಾಶ್ವತವಾಗಿ ನೆನಪಿಸಿಕೊಡುವಂತಹ ಸಂಸ್ಥೆಯನ್ನು ಯಾರೂ ಹುಟ್ಟು ಹಾಕಿರಲಿಲ್ಲ. (ಮುಂದುವರಿಯುತ್ತದೆ)





# ಪತ್ರಿಕಾ ನೆನಪು





ಸಂಕ್ಷಿಪ್ತ ಸುದ್ದಿ 24/7/21

ಕಾಲೊನಿ, ಬೆಂಗಳೂರು
ಸಂಪರ್ಕ:080-26615877

## ಅರ್ಜಿ ಆಹ್ವಾನ

ಬೆಂಗಳೂರು: ಬಿಎಂಶ್ರೀ ಪ್ರತಿಷ್ಠಾನದ ವತಿಯಿಂದ ನೀಡಲಾಗುವ 2020ನೇ ಸಾಲಿನ 'ಶಾ.ಬಾಲೂರಾವ್ ಯುವ ಬರಹಗಾರ ಪ್ರಶಸ್ತಿ' ಹಾಗೂ 'ಶಾ. ಬಾಲೂರಾವ್ ಅನುವಾದ ಪ್ರಶಸ್ತಿ'ಗೆ ಲೇಖಕರಿಂದ ಪುಸ್ತಕಗಳನ್ನು ಆಹ್ವಾನಿಸಲಾಗಿದೆ.

ಪ್ರಶಸ್ತಿಗಳು ತಲಾ ₹25 ಸಾವಿರ ನಗದು, ಸ್ಮರಣಿಕೆ ಒಳಗೊಂಡಿವೆ.

ಯುವ ಬರಹಗಾರ ಪ್ರಶಸ್ತಿಗೆ 35 ವರ್ಷದೊಳಗಿನವರು ರಚಿಸಿರುವ 2020ರಲ್ಲಿ ಮೊದಲ ಮುದ್ರಣದಲ್ಲಿ ಪ್ರಕಟವಾದ ಸಾಹಿತ್ಯದ ಯಾವುದೇ ಪ್ರಕಾರದ ಪುಸ್ತಕಗಳು ಹಾಗೂ ಅನುವಾದ ಪ್ರಶಸ್ತಿಗೆ ಬೇರೆ ಭಾಷೆಗಳಿಂದ ಕನ್ನಡಕ್ಕೆ ಅನುವಾದಗೊಂಡಿರುವ ಪುಸ್ತಕಗಳನ್ನು ಸಲ್ಲಿಸಬಹುದು.

ಪುಸ್ತಕದ ಮೂರು ಪ್ರತಿಗಳು ಹಾಗೂ ಸ್ವವಿವರಗಳನ್ನು ಆಗಸ್ಟ್ 16ರೊಳಗೆ ಪ್ರತಿಷ್ಠಾನದ ವಿಳಾಸಕ್ಕೆ ತಲುಪಿಸುವಂತೆ ಪ್ರಕಟಣೆ ತಿಳಿಸಿದೆ.

ವಿಳಾಸ:ಗೌರವ ಕಾರ್ಯದರ್ಶಿ, ಬಿಎಂಶ್ರೀ ಪ್ರತಿಷ್ಠಾನ, ಎನ್.ಆರ್.

ಪ್ರಜಾವಾಣಿ ಭಾನುವಾರ ● ಆಗಸ್ಟ್ 15, 2021



ಬಿ.ಎಂ.ಶ್ರೀ. ಪ್ರತಿಷ್ಠಾನ ಆಯೋಜಿಸಿದ ಕಾರ್ಯಕ್ರಮದಲ್ಲಿ ಚಿದಾನಂದ ಸಾಲಿ ಅವರಿಗೆ 'ಪ್ರೊ.ಸೂ.ವೆಂ. ಅರಗ ವಿಮರ್ಶಾ ಪ್ರಶಸ್ತಿ' ಹಾಗೂ ಪ್ರೇಮಾ ಭಟ್ ಅವರಿಗೆ 'ಡಾ. ವಿಜಯಾ ಸುಬ್ಬರಾಜ್ ಗಣ್ಯ ಲೇಖಕಿ ಪ್ರಶಸ್ತಿ'ಯನ್ನು ಆರ್.ಕೆ. ನಲ್ಲೂರ್ ಪ್ರಸಾದ್ ಅವರು ಪ್ರದಾನ ಮಾಡಿದರು. ಲೇಖಕಿ ವಿಜಯಾ ಸುಬ್ಬರಾಜ್, ಪ್ರತಿಷ್ಠಾನದ ಅಧ್ಯಕ್ಷ ಆರ್. ಲಕ್ಷ್ಮೀನಾರಾಯಣ, ಗೌರವ ಕಾರ್ಯದರ್ಶಿ ಬಿ.ಸಿ. ರಾಜಕುಮಾರ್ ಹಾಗೂ ನಿವೃತ್ತ ಪ್ರಾಧ್ಯಾಪಕಿ ಡಿ. ಮಂಗಳಾ ಪ್ರಿಯದರ್ಶಿನಿ ಇದ್ದರು —ಪ್ರಜಾವಾಣಿ ಚಿತ್ರ

## ಹೂಗುಚ್ಛ ನಿಷೇಧ ಮೂರ್ಖತನದ ಪರಮಾವಧಿ: ನಲ್ಲೂರು ಪ್ರಸಾದ್

ಪ್ರಜಾವಾಣಿ ವಾರ್ತೆ

ಬೆಂಗಳೂರು: 'ಸಭೆ, ಸಮಾರಂಭಗಳಲ್ಲಿ ಹೂಗುಚ್ಛ-ಹೂವಿನ ಹಾರಗಳನ್ನು ಬಳಸಬಾರದೆಂಬ ಸರ್ಕಾರದ ಆದೇಶ ಮೂರ್ಖತನದ ಪರಮಾವಧಿ' ಎಂದು ಕನ್ನಡ ಸಾಹಿತ್ಯ ಪರಿಷತ್ತಿನ ಮಾಜಿ ಅಧ್ಯಕ್ಷ ಆರ್.ಕೆ. ನಲ್ಲೂರು ಪ್ರಸಾದ್ ಆಕ್ರೋಶ ವ್ಯಕ್ತಪಡಿಸಿದರು.

ಬಿ.ಎಂ.ಶ್ರೀ. ಪ್ರತಿಷ್ಠಾನ ನಗರದಲ್ಲಿ ಶನಿವಾರ ಆಯೋಜಿಸಿದ್ದ ಕಾರ್ಯಕ್ರಮದಲ್ಲಿ ಲೇಖಕಿ ಪ್ರೇಮಾ ಭಟ್ ಅವರಿಗೆ 'ಡಾ. ವಿಜಯಾ ಸುಬ್ಬರಾಜ್ ಗಣ್ಯ ಲೇಖಕಿ ಪ್ರಶಸ್ತಿ' ಹಾಗೂ ಸಾಹಿತಿ ಚಿದಾನಂದ ಸಾಲಿ ಅವರಿಗೆ 'ಪ್ರೊ.ಸೂ.ವೆಂ. ಅರಗ ವಿಮರ್ಶಾ ಪ್ರಶಸ್ತಿ'ಯನ್ನು ಪ್ರದಾನ ಮಾಡಿದರು. ಈ ಪ್ರಶಸ್ತಿಗಳು ತಲಾ ₹ 10 ಸಾವಿರ ನಗದು ಒಳಗೊಂಡಿವೆ.

'ನಾವು ಪುಸ್ತಕಗಳ ವಿರೋಧಿಗಳಲ್ಲ. ಸಭೆ-ಸಮಾರಂಭಗಳಲ್ಲಿ ಎರಡೆರಡು ಪುಸ್ತಕಗಳನ್ನು ಬೇಕಾದರೂ ನೀಡಲಿ. ಆದರೆ, ಹೂಗುಚ್ಛ-ಹೂವಿನ ಹಾರಗಳನ್ನು ಸರ್ಕಾರಿ ಕಾರ್ಯಕ್ರಮಗಳಲ್ಲಿ ನೀಡಬಾರದು ಎನ್ನುವುದು ಸರಿಯಲ್ಲ. ಈ ನೆಲವನ್ನೇ ನಂಬಿ ರೈತರು ಬೆಳೆಯುವ ಹೂವು ಕೂಡ ಪುಸ್ತಕದಷ್ಟೇ ಮುಖ್ಯ. ಹೂವಿನ ಹಾರ-ಹೂಗುಚ್ಛ ನಿಷೇಧಿಸಲು ರೈತರು ಸರ್ಕಾರಕ್ಕೆ ಕಂದಾಯ ಕಟ್ಟುತ್ತಿಲ್ಲವೇ' ಎಂದು ಪ್ರಶ್ನಿಸಿದರು.

'ಚಿಕ್ಕ ವಯಸ್ಸಿನಿಂದಲೂ ನನಗೆ ಕನ್ನಡ ಭಾಷೆಯ ಬಗ್ಗೆ ಅಪಾರ ಪ್ರೀತಿ. ವಿಜ್ಞಾನ ವಿಷಯ ವ್ಯಾಸಂಗ ಮಾಡುವುದಿಲ್ಲವೆಂದು ಹೇಳಿ, ನಾಲ್ಕು ವರ್ಷಗಳು ದನ ಕಾಯುವ ಕೆಲಸ ಮಾಡಿದೆ. ಆ ವೇಳೆಯಲ್ಲೇ ನಾನು ಸಣ್ಣ ಕವಿತೆಗಳನ್ನು ಬರೆದೆ. ಕನ್ನಡದ ಮೇಲಿನ ಒಲವು ನನ್ನನ್ನು ಸಾಹಿತ್ಯ ಕ್ಷೇತ್ರದಲ್ಲಿ ಗುರುತಿಸಿಕೊಳ್ಳುವಂತೆ ಮಾಡಿತು' ಎಂದು ಹೇಳಿದರು.

ನಿವೃತ್ತ ಪ್ರಾಧ್ಯಾಪಕಿ ಡಿ. ಮಂಗಳಾ ಪ್ರಿಯದರ್ಶಿನಿ ಮಾತನಾಡಿ, 'ಬೃಹತ್ ಕೃತಿಗಳನ್ನು ಬರೆಯುವುದಕ್ಕಿಂತ ಸಣ್ಣ ಕತೆಗಳನ್ನು ರಚಿಸುವುದು ಕಷ್ಟದ ಕೆಲಸ. ಆದರೆ, ಪ್ರೇಮಾ ಭಟ್ ಅವರು ಕತೆಗಳನ್ನು ಕಲಾತ್ಮಕವಾಗಿ ಬರೆಯುವಲ್ಲಿ ಯಶಸ್ವಿಯಾಗಿದ್ದಾರೆ. ಚಿದಾನಂದ ಸಾಲಿ ಅವರು ಕತೆ, ಕವಿತೆ, ಗಜಲ್, ನಾಟಕ, ಸಂಶೋಧನೆ, ವಿಮರ್ಶೆ ಸೇರಿದಂತೆ ಸಾಹಿತ್ಯದ ಹಲವು ಪ್ರಕಾರಗಳಲ್ಲಿ ಕೊಡುಗೆ ನೀಡಿದ್ದಾರೆ' ಎಂದು ಮೆಚ್ಚುಗೆ ವ್ಯಕ್ತಪಡಿಸಿದರು.

## ಶಿವರಾಮಯ್ಯಗೆ ಸಾಹಿತ್ಯ ಪ್ರಶಸ್ತಿ

ಬೆಂಗಳೂರು: ಬಿಎಂಶ್ರೀ ಪ್ರತಿಷ್ಠಾನ ನೀಡುವ 2021ನೇ ಸಾಲಿನ 'ಸಾವಿತ್ರಮ್ಮ-ಪ್ರೊ. ಎಂ.ವಿ. ಸೀತಾರಾಮಯ್ಯ ಸಾಹಿತ್ಯ ಪುರಸ್ಕಾರ'ಕ್ಕೆ ಸಾಹಿತಿ ಪ್ರೊ. ಶಿವರಾಮಯ್ಯ ಅವರನ್ನು ಆಯ್ಕೆ ಮಾಡಲಾಗಿದೆ.



ಪ್ರಶಸ್ತಿ 30 ಸಾವಿರ ರೂ. ನಗದು ಹಾಗೂ ಸ್ಮರಣಿಕೆ ಒಳಗೊಂಡಿದೆ. ಸಾಹಿತ್ಯ ಮತ್ತು ವಿದ್ವತ್ ಕ್ಷೇತ್ರಕ್ಕೆ ನೀಡಿರುವ ಗಣನೀಯ ಕೊಡುಗೆ ಪರಿಗಣಿಸಿ ಶಿವರಾಮಯ್ಯ ಅವರನ್ನು ಆಯ್ಕೆ ಮಾಡಲಾಗಿದೆ ಎಂದು ಪ್ರತಿಷ್ಠಾನದ ಅಧ್ಯಕ್ಷ ಡಾ. ಆರ್. ಲಕ್ಷ್ಮೀನಾರಾಯಣ ತಿಳಿಸಿದ್ದಾರೆ.

## 'ಪರಂಪರೆಯ ಪ್ರತಿರೋಧದಿಂದಲೇ ಸಾಹಿತ್ಯ ಚಳವಳಿ'

ಬೆಂಗಳೂರು: 'ಈಗಿನ ಬರಹಗಾರರು ಪರಂಪರೆಯನ್ನು ಅರಿತುಕೊಂಡು ಸಾಹಿತ್ಯ ಸೃಷ್ಟಿಸಬೇಕು. ಪರಂಪರೆಯ ಪ್ರತಿರೋಧದಿಂದಲೇ ಸಾಹಿತ್ಯ ಚಳವಳಿ ಹುಟ್ಟಿರುವುದು' ಎಂದು ವಿಮರ್ಶಕ ಎಚ್. ದಂಡಪ್ಪ ತಿಳಿಸಿದರು.

ಎಚ್. ದಂಡಪ್ಪ

ಬಿಎಂಶ್ರೀ ಪ್ರತಿಷ್ಠಾನವು ರುಕ್ಮಿಣಮ್ಮ ಸೀತಾರಾಮರಾವ್ ದತ್ತಿ ಕಾರ್ಯಕ್ರಮದ ಪ್ರಯುಕ್ತ 'ಕನ್ನಡದ ಸಾಹಿತ್ಯದಲ್ಲಿ ಪರಂಪರೆ ಮತ್ತು ಪ್ರತಿಭಟನೆ' ಎಂಬ ವಿಷಯದ ಮೇಲೆ ಆನ್‌ಲೈನ್ ವೇದಿಕೆಯಲ್ಲಿ ಮಂಗಳವಾರ ಆಯೋಜಿಸಿದ ಉಪನ್ಯಾಸದಲ್ಲಿ ಮಾತನಾಡಿದರು.

'ಮನುಷ್ಯ ಕೇಂದ್ರಿತ ವಿಚಾರಗಳು ಪರಂಪರೆಯಾಗಿ ಬೆಳೆಯುತ್ತಾ ಬಂದಿದೆ. ಆದರೆ, ಅದು ಪ್ರತಿರೋಧಗಳಿಂದ ಹೊಸ ಹೊಸ ರೂಪಗಳನ್ನು ಪಡೆದಿದೆ. ಪರಂಪರೆ ಎನ್ನುವುದು ಒಂದು ಕಡೆಯಿಂದ ಮತ್ತೊಂದು ಕಡೆ ನಿರಂತರ ಚಲನಶೀಲತೆಯಿಂದ ಕೂಡಿರುತ್ತದೆ. ಸಂಪ್ರದಾಯವು ಜಡತ್ವವನ್ನು ಹೊಂದಿರುತ್ತದೆ. ಸಾಹಿತ್ಯವೂ ಒಂದು ಪರಂಪರೆಯಾಗಿ ಉಳಿದುಕೊಂಡು ಬಂದಿದೆ' ಎಂದರು.

ಪ್ರತಿಷ್ಠಾನದ ಅಧ್ಯಕ್ಷ ಆರ್. ಲಕ್ಷ್ಮೀನಾರಾಯಣ, ಗೌರವ ಕಾರ್ಯದರ್ಶಿ ಬಿ.ಸಿ. ರಾಜಕುಮಾರ್ ಇದ್ದರು.

'ಕನ್ನಡದ ಸಾಹಿತ್ಯದಲ್ಲಿ ಪರಂಪರೆ ಮತ್ತು ಪ್ರತಿಭಟನೆ'
ಉಪನ್ಯಾಸ: ಎಚ್.ದಂಡಪ್ಪ,
ಆಯೋಜನೆ-ಬಿಎಂಶ್ರೀ ಪ್ರತಿಷ್ಠಾನ, ಸಂಜೆ
.30 (ಆನ್‌ಲೈನ್ ಕಾರ್ಯಕ್ರಮ)

ಡಾ.ವಿಜಯಾಸುಬ್ಬರಾಜ್ ಗಣ್ಯಲೇಖಕಿ ಪ್ರಶಸ್ತಿ ಹಾಗೂ ಸೂ.ವೆಂ.ಅರಗ ವಿಮರ್ಶಾ ಪ್ರಶಸ್ತಿ ಪ್ರದಾನ: ನಲ್ಲೂರು ಪ್ರಸಾದ್, ಪುರಸ್ಕೃತರು-ಚಿದಾನಂದ ಸಾಲಿ, ಪ್ರೇಮಾ ಭಟ್, ಭಾಗವಹಿಸುವವರು-ಆರ್.ಲಕ್ಷ್ಮೀ ನಾರಾಯಣ, ಆಯೋಜನೆ, ಸ್ಥಳ-ಬಿಎಂಶ್ರೀ ಪ್ರತಿಷ್ಠಾನ, ಎಂವಿಸೀ ಸಭಾಂಗಣ, ಎನ್.ಆರ್.ಕಾಲೊನಿ, ಬೆಳಿಗ್ಗೆ 11

## ಡಾ.ಕೆ.ರಾಜೇಶ್ವರಿ ದೊಡ್ಡರಂಗೇಗೌಡ ದತ್ತಿನಿಧಿ ಸ್ಥಾಪನೆ

ಕನ್ನಡ ಪ್ರಾಧ್ಯಾಪಕಿ, ಸಾಹಿತಿ ದಿವಂಗತ ಡಾ. ಕೆ. ರಾಜೇಶ್ವರಿ ದೊಡ್ಡರಂಗೇಗೌಡರ ಸ್ಮರಣಾರ್ಥವಾಗಿ ಅವರ ಪತಿ ಖ್ಯಾತ ಕವಿ, ಸಾಹಿತಿ, ಪದ್ಮಶ್ರೀ ಡಾ. ದೊಡ್ಡರಂಗೇಗೌಡರು ಪ್ರತಿಷ್ಠಾನದಲ್ಲಿ ೨ ಲಕ್ಷ ರೂಪಾಯಿಗಳ ದತ್ತಿನಿಧಿಯನ್ನು ಸ್ಥಾಪಿಸಿ ಇದರಡಿಯಲ್ಲಿ ಪ್ರತಿವರ್ಷವೂ ದಿ: ೧೯–೯ ರಂದು ಅಥವಾ ಸೆಪ್ಟೆಂಬರ್ ತಿಂಗಳಿನಲ್ಲಿ ಸಂಸ್ಮರಣಾರ್ಥವಾಗಿ ಸಾಹಿತ್ಯಕ ಕಾರ್ಯಕ್ರಮವನ್ನು ಏರ್ಪಡಿಸಬೇಕೆಂದು ಕೋರಿದ್ದಾರೆ.

೫–೧೦–೧೯೫೪ರಂದು ಜನಿಸಿದ ಡಾ. ಕೆ.ರಾಜೇಶ್ವರಿಯವರು ಎಂ.ಎ. (ಕನ್ನಡ) ಮತ್ತು ಪಿಎಚ್.ಡಿ. ಪಡೆದಿದ್ದಾರೆ. ಡಾ. ಕೆ. ರಾಜೇಶ್ವರಿಯವರು ಬಿ.ಎಂ.ಎಸ್. ಮಹಿಳಾ ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕಿಯಾಗಿ ೩೨ ವರ್ಷಗಳ ಕಾಲ ಸೇವೆ ಸಲ್ಲಿಸಿದ್ದಾರೆ. ಕಾದಂಬರಿ, ಸಣ್ಣಕತೆ, ಪ್ರವಾಸ ಸಾಹಿತ್ಯ, ಅನುವಾದ, ಆಧುನಿಕ ವಚನ, ಕಾವ್ಯ ಸೇರಿದಂತೆ ೧೩ ಕೃತಿಗಳನ್ನು ರಚಿಸಿದ್ದಾರೆ.



# ಎಂ.ವಿ.ಸಿ.
# ಬದುಕು ಬರಹ – ೧೮

– ಡಾ. ಪಿ.ವಿ. ನಾರಾಯಣ

ಹಿಂದಿನಸಂಚಿಕೆಯಿಂದ

ಎಂವಿಸೀ ಹತ್ತಾರು ಮಹನೀಯರನ್ನು ಕುರಿತು ಕವನಗೌರವ ಸೂಚಿಸಿದ್ದಾರೆ. ಅಂತಹವರಲ್ಲಿ ಕನ್ನಡ ನಾಡಿನ, ಭಾರತದ ಹಲವರು ಸೇರಿದ್ದಾರೆ. ಕೈಲಾಸಂ, ಬೇಂದ್ರೆ, ಎಂಆರ್‌ಶ್ರೀ, ಬಿಎಂಶ್ರೀ, ತೀನಂಶ್ರೀ, ಡಿವಿಜಿ, ಮಾಸ್ತಿ, ಪುರಂದರದಾಸ, ಬಸವಣ್ಣ, ರಾಮಕೃಷ್ಣ ಪರಮಹಂಸ, ವಿವೇಕಾನಂದ, ಗಾಂಧಿಯವರ ಬಗ್ಗೆ ಹಲವಾರು ಕವನಗಳು – ಹೀಗೆ ಪಟ್ಟಿ ಬೆಳೆಯುತ್ತದೆ. ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯದರ್ಶಿಯಾಗಿ ಕೆಲಸಮಾಡಿದ್ದ ಎಂವಿಸೀ ಅವರಿಗೆ ಬಹು ಮುಖ್ಯ ಕನ್ನಡ ಬರಹಗಾರರ ನೇರ ಪರಿಚಯವಿತ್ತು, ಒಡನಾಟವಿತ್ತು. ಹೀಗಾಗಿ ಅಂತಹವರ ಕೆಲಸದ ಮಹತ್ವದ ಜೊತೆಗೆ ಅವರ ಸ್ವಭಾವಪರಿಚಯವೂ ನಿಕಟವಾಗಿಯೇ ಇತ್ತು. ಹೀಗಾಗಿ ತಾವು ಕವನದ ಮೂಲಕ ಗೌರವ ಸೂಚಿಸುವ ಎಲ್ಲ ಬರಹಗಾರರ ಹೊರರೂಪು, ಸ್ವಭಾವಗಳ ಚಿತ್ರಣದ ಜೊತೆಯಲ್ಲಿ ಅವರ ಕೆಲಸದ ಸ್ವರೂಪವನ್ನೂ ಗುರುತಿಸುವ ರೀತಿಯಲ್ಲಿ ಈ ಕವನ ಕಾಣಿಕೆಗಳ ರಚನೆಯಿದೆ. ಎಂಆರ್‌ಶ್ರೀ ಅವರನ್ನು ಕುರಿತು,

ಎತ್ತರದ ನಿಲುವಿನಿಂ ಗೆಲುವಿನಿಂ ಚೆಲುಮೂರ್ತಿ
ಬಿತ್ತರದ ನುಡಿಯ ಗುಡಿಯೊಳು ನಿನ್ನ ಕೃತಿಮೂರ್ತಿ
ಕೆತ್ತಿಹುದು, ಮೌನ ಸೇವೆಯ ಶಾಸನದ ಕೀರ್ತಿ
ಮೌನಿ ಮಾತಿಗೆ ಮೊದಲ್; ತೊಡಗೆವಾಗ್ಮಿ ಪ್ರವರ

ಎಂದು ಅವರ ಹೊರರೂಪು ಮತ್ತುಸ್ವಭಾವಗಳ ಬಹುಸುಂದರ ಚಿತ್ರವನ್ನು ನೀಡುತ್ತಾರೆ. ಬೇಂದ್ರೆಯವರ ವಿರಾಟ್ ಕವಿಪ್ರತಿಭೆಯನ್ನು ಈ ಕವಿ ಬಣ್ಣಿಸುವ ಪರಿ ಇದು:

ನೆಲದ ನಲವ ಚೆಲುವ ಮಯೂರ ನರ್ತನ ಸಾಕೆ
ವ್ಯೋಮವಿಹಾರಾಕಾಂಕ್ಷಿ ಪಕ್ಷಿರಾಜನಿಗೆ?
ಆಮೆ ಬಾವಿಯ ಮಾನಸ ಸರೋವರದ ಹಂಸರಾಜನಿಗೆ?

ಡಿವಿಜಿ ಎಲ್ಲ ಕಾಲಕ್ಕೂ ತಮ್ಮ 'ಮಂಕುತಿಮ್ಮನ ಕಗ್ಗ'ದ ಮೂಲಕ ಸ್ಮರಣಾರ್ಹರು. ಅವರಿಗೆ ಗೌರವಾರ್ಪಣೆ ಮಾಡಲು ರಚಿಸಿರುವ ಪದ್ಯ ಕಗ್ಗದ ಛಂದಸ್ಸಿನಲ್ಲಿಯೇ ಇದೆ. ಡಿವಿಜಿ ವ್ಯಕ್ತಿತ್ವಸ್ವರೂಪವ ಹಾಗೂ ಇಡೀ ಆ ಕೃತಿಯ ಸಾರವನ್ನು ಭಟ್ಟಿಯಿಳಿಸಿದಂತೆ ಎಂವಿಸೀ ರಚಿಸಿರುವ ಪದ್ಯವಿದು:

ಪಡುವಣದ ವಿಜ್ಞಾನ, ಮೂಡಣಾತ್ಮಜ್ಞಾನ
ವೊಡಗೂಡೆ ವಿಶ್ವಕಲ್ಯಾಣಸಾಧಕವು
ಪಿಡಿಯಿರೀ ಮಾರ್ಗವೆಂದೆಡೆಬಿಡದೆ ಬೋಧಿಸುತ
ಪಡೆದೆ ನೀ ಗುರುಪದವ –ಮಂಕುತಿಮ್ಮ

ಬಿಎಂಶ್ರೀ ಅವರ ನಿಧನದ ಸಂದರ್ಭದಲ್ಲಿ ಶಿಷ್ಯಕವಿ ಅರ್ಪಿಸಿದ 'ಕಂಬನಿ ಕಾಣಿಕೆ'ಯ ಸಾಲುಗಳಿವು

ನಿನ್ನಂತೆ ಕೊಟ್ಟರಾರ್ ತನುಮನಧನವ ನುಡಿಗೆ
ನಿನತೆ ಇಟ್ಟರಾರ್ ವಯಿರಮುಡಿ ತಾಯ ಮುಡಿಗೆ?

(ಮುಂದುವರಿಯುವುದು)

HONGANASU KANNADA MONTHLY
RNI No. KAR/KAN/2015/64049
REGISTERED
Post office Registration No.RNP/KA/BGS/2229/2021-2023
dt. 28-12-2020
Office of Posting: Bangalore PSO, Bangalore 560026
Price : Annual Subscription Rs. 20/-
Date of publishing and Posting : 30-8-2021

## ಡಾ.ವಿಜಯಾ ಸುಬ್ಬರಾಜ್ ಅವರ ಸಮಗ್ರ ಸಾಹಿತ್ಯ ಕೃತಿಗಳ ಅನಾವರಣ

ಡಾ. ವಿಜಯಾ ಸುಬ್ಬರಾಜ್ ಅವರು ಪ್ರತಿಷ್ಠಾನದೊಂದಿಗೆ ದೀರ್ಘಕಾಲ ನಿಕಟ ಸಂಪರ್ಕದಲ್ಲಿರುವವರು ಮತ್ತು ಪಿಎಚ್. ಡಿ. ವಿಭಾಗದ ಸಂಯೋಜನಾಧಿಕಾರಿಯಾಗಿ ಕಾಯ ರ್ ನಿರ್ವಹಿಸುತ್ತಿದ್ದಾರೆ. ಪ್ರತಿಷ್ಠಾನದ ಗ್ರಂಥಾಲಯಕ್ಕೆ ಡಾ. ವಿಜಯಾ ಸುಬ್ಬರಾಜ್ ಅವರು ಒಟ್ಟು ೫೫ ಪುಸ್ತಕಗಳನ್ನು ನೀಡಿರುತ್ತಾರೆ. ಡಾ. ಪಿ. ವಿ. ನಾರಾಯಣ ಅವರು ಡಾ. ವಿಜಯಾಸುಬ್ಬರಾಜ್ ಅವರ ಕೃತಿಗಳನ್ನು ಅನಾವರಣ ಮಾಡಿದರು.

ಇದೇ ಸಂದರ್ಭದಲ್ಲಿ ಡಾ. ವಿಜಯಾಸುಬ್ಬರಾಜ್ ಅವರ "ಈಡಿಪಸ್ ಮತ್ತು ಅಂತಿಗೊನೆ" ಕಾದಂಬರಿಯನ್ನು ಡಾ. ಆರ್.ಲಕ್ಷ್ಮೀನಾರಾಯಣ ಅಧ್ಯಕ್ಷರು ಬಿಡುಗಡೆಮಾಡಿದರು.

ಶ್ರೀ ಬಿ.ಎಸ್. ಗುರುಪ್ರಸಾದ್ ಅವರು ಮೇಲಿನ ಎರಡೂ ಕಾರ್ಯಕ್ರಮಗಳನ್ನು ಏರ್ಪಡಿಸಿ, ಸ್ವಾಗತ ಮತ್ತು ವಂದನಾರ್ಪಣೆಯನ್ನೂ ನೆರವೇರಿಸಿದರು.

**Printed and published by** : B.R.Ravindranath on behalf of the BMSRI SMARAKA PRATISHTANA, B.M.Sri Pratishtana Road, (3rd Main Road) NR Colony, Bangalore - 560019 and printed at Annapoorneshwari Printers, No. 11, 10 'C' Main, 6th Block, Rajajinagar, Bangalore 10 . and published at BMSRI SMARAKA PRATISHTANA, B.M.Sri Pratishtana Road, 3rd Main Road, NR Colony, Bangalore - 560019 Editor : **B.R.Ravindranath**

**ಅಚ್ಚಾದ ಪುಸ್ತಕ**

ಶ್ರೀಮತಿ/ಶ್ರೀ.............................................................................................

.............................................................................................................

.............................................................................................................

ವಿಳಾಸ
**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**
ಬಿ.ಎಂ.ಶ್ರೀ. ಪ್ರತಿಷ್ಠಾನದ ರಸ್ತೆ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು – ೧೯
ದೂರವಾಣಿ : ೨೬೬೧೫೮೭೭